# “ಇಲೆಕ್ಶನ್”

ನಗಿಸಿ, ನಲಿಸುವ

ಗಳಿಗೆಯ ಮೋಜು

ಬರೆದವ.

ಎನ್. ಕೆ. ಕುಲಕರ್ಣಿ

(ಪ್ರೊ. ಜಾಗಿರದಾರರ ಮುನ್ನುಡಿಯೊಡನೆ)



ಕ್ರಯ ನಾಲ್ಕಾಣೆ.

—ಪ್ರಕಾಶಕರು:-
ಎನ್. ಕೆ. ಕುಲಕರ್ಣಿ.



ಅಕ್ಟೋಬರ ೧೯೩೪.

ಮೊದಲನೆಯ ಆವೃತ್ತಿ ೧೦೦೦ ಪ್ರತಿಗಳು

ಮುದ್ರಕರು:-
ಅಣ್ಣಾಚಾರ್ಯ ಹೊಸಕೇರಿ
ವಿಜಯ ಮುದ್ರಣಾಲಯ, ಧಾರವಾಡ.

# ಮುನ್ನುಡಿ

ಈ ಚಿಕ್ಕ ರೂಪಕಕ್ಕೆ ಮುನ್ನುಡಿ ಬರೆಯ್ಯುವುದು ನನಗೆ ತುಂಬಾ ಅಭಿಮಾನವೆನ್ನಿಸುತ್ತದೆ; ಸಂತೋಷವೆನ್ನಿಸುತ್ತದೆ. ಕೇವಲ ತನ್ನ ಯೋಗ್ಯತೆಯಿಂದಲೆ ಓದುಗರಿಗೆ ರುಚಿಸಿ ಒಪ್ಪಿಗೆಯಾಗುವಂತಿದ್ದಾಗೂ ನನ್ನದೊಂದು ಮುನ್ನುಡಿಯನ್ನು ಬರೆದು ಜನರ ಮುಂದೆ ಇದನ್ನು ಇಡುವ ಗೌರವಕ್ಕಾಗಿ ನನಗೆ ಅಭಿಮಾನ; ನಮ್ಮ ಕಾಲೇಜಿನ ವಿದ್ಯಾರ್ಥಿಯೊಬ್ಬರು ಬರೆದ ನಾಟಕ, ಅದರಲ್ಲೂ ನಾಟಕದ ವಿಷಯವಾಗಿ ನನ್ನಲ್ಲಿದ್ದ ಮತಾಭಿಪ್ರಾಯಗಳನ್ನು ಸಮರ್ಥಿಸುವಂತಹ ಶೈಲಿಯ ನಾಟಕ ಎಂದು ನನಗೆ ಸಂತೋಷ.

ಇದರಲ್ಲಿಯ ವಸ್ತುವೇನೊ ನಾಟಕಕಾರನ ನಿಕಟ ಪರಿಚಯಕ್ಕೊಳಗೊಂಡ ಕಾಲೇಜಿನ ವಿದ್ಯಾರ್ಥಿಗಳ ನಡೆ-ನುಡಿಗಳ ವಾತಾವರಣಕ್ಕೆ ಸಂಬಂಧಿಸಿದೆ; ಕೆಲವು ಸಂನಿವೇಶಗಳನ್ನು ಬಿಟ್ಟುಕೊಟ್ಟಲ್ಲಿ ನಾಟಕದ ಬಹು ಭಾಗವು ಬೇರೆ ಬೇರೆ ಸಂಸ್ಥೆಗಳಲ್ಲಿಯ ವಿದ್ಯಾರ್ಥಿಗಳಿಗೆ ಸಮನ್ವಯಿಸಬಹುದು; ಅದರಂತೆಯೆ ಒಂದೆರಡು ಕಡೆ ಸ್ಥಲಿಕ ಸಂಗತಿಗಳಿಗೆ ಸರಿಹೋಗುವಂತೆ ಮಾರ್ಪಾಟುಗಳನ್ನು ಮಾಡಿಕೊಂಡಲ್ಲಿ ಈ ರೂಪಕವು ಆಡಿ ತೋರಿಸಿದಲ್ಲೆಲ್ಲ ಜನರನ್ನು ರಂಜಿಸಬಹುದು. ಆದರೂ ಇವೆಲ್ಲವುಗಳಿಗಿಂತ ಬೇರೆಯಾದ ಮತ್ತೊಂದು ಸಂಗತಿಯು ನನ್ನ ಮನಸ್ಸನ್ನು ಸೆಳೆದಿದೆ, ಮುನ್ನುಡಿಯನ್ನು ಬರೆಯಲು ನನ್ನನ್ನು ಎಳೆದಿದೆ. ಅದೆಂದರೆ—(೧) ನಾಟಕಕಾರರಾದ **ಶ್ರೀ. ಎನ್. ಕೆ. ಕುಲಕರ್ಣಿ**ಯವರ ಸೂಕ್ಷ್ಮವಾಗಿ ಪರೀಕ್ಷಿಸುವ ಶಕ್ತಿ, ಮತ್ತು (೨) ಅದನ್ನು ಸೊಗಸಾಗಿ ನಿರೂಪಿಸುವ ಶಕ್ತಿ. ಇವೆರಡು ಶಕ್ತಿಗಳಿಂದ ಶ್ರೀ. ಕುಲಕರ್ಣಿಯವರು ಇಂದಿಲ್ಲ ನಾಳೆ ಮೇಲ್ತರಗತಿಯ ನಾಟಕಗಳನ್ನು ಬರೆಯುವರೆಂಬ ಭರವಸೆ ಇದೆ ನನಗೆ. ಸುತ್ತಲಿನ ಸ್ಥಿತಿಗತಿಗಳಿಗೆ, ಸಮಕಾಲೀನ ಪರಿಸ್ಥಿತಿಗೆ ಸಂಬಂಧಿಸಿದ ಸಾಹಿತ್ಯವು ನಮ್ಮಲ್ಲಿ ಕಡಮೆ.

ಇಂತಹ ವೇಳೆಗೆ ಸುತ್ತಲಿನ ಸಂನಿವೇಶದಲ್ಲಿ ಬೆರೆತುಕೊಂಡು, ಅದನ್ನು ಬಿಡಿಯಾಗಿ ಅರಿತುಕೊಂಡು, ನಾಟಕರೂಪದಿಂದ ಅದನ್ನು ಇಡಿಯಾಗಿ—ಜನರ ಮನಸ್ಸನ್ನು ಹಿಡಿಯುವಂತಾಗಿ—ಕಾಣಿಸುವ ಕೈಚಳಕದ ಸಾಹಿತಿಗಳು ನಮಗೆ ಅವಶ್ಯವಾಗಿ ಬೇಕು. ಹೀಗೆ ನಮಗೆ ಬೇಕೆನ್ನಿಸುವ ಸಾಹಿತಿಗಳಲ್ಲಿ ಸೇರಿಕೊಳ್ಳುವ ಯೋಗ್ಯತೆಯು ಶ್ರೀ ಎನ್. ಕೆ ಕುಲಕರ್ಣಿಯವರಲ್ಲಿದೆ ಎಂದು ನಾನು ಸಂಕೋಚವಿಲ್ಲದೆ ಹೇಳಬಲ್ಲೆ ಶ್ರೀ ಕುಲಕರ್ಣಿಯವರು ಇದೇ ಸಾಹಿತ್ಯ ಸಾಮ್ರಾಜ್ಯದಲ್ಲಿ ಕಾಲಿಡುವ ತರುಣರೆಂಬದನ್ನು ಲಕ್ಷ್ಯದಲ್ಲಿ ತಂದುಕೊಂಡರೆ ನನಗಾದ ಅಭಿಮಾನ-ಸಂತೋಷಗಳ ಕಲ್ಪನೆಯು ಓದುಗರಿಗಾಗಬಹುದು. ಇವರು ಮೇಲ್ತರಗತಿಯ ನಾಟಕಕಾರರಾಗುವರೆಂಬ ನನ್ನ ಭರವಸೆಯು ಬೇಗನೆ ಪೂರೈಸಲೆಂದು ಬೇಡಿಕೊಂಡು ಈ ಮುನ್ನುಡಿಯನ್ನು ಮುಗಿಸುತ್ತೇನೆ.

೮-೧೦-೩೪
ಮಾಳಮಡ್ಡಿ

ಶ್ರೀರಂಗ.

# ಬರೆದವನ ನುಡಿ.

ಪ್ರೊ. ಜಾಗಿರದಾರರು ಮುಖಸ್ತುತಿಗೆ ಮುನ್ನುಡಿ ಬರೆದಿರುವರೊ, ಇಲ್ಲವೆ ಇದರಲ್ಲಿ ಏನಾದರೂ ಹುರುಳಿರುವದೆಂದು ಇಷ್ಟು ಹೆಮ್ಮೆಯಿಂದ, ಬರೆದಿರುವರೊ, ವಾಚಕರೇ ತಿಳಿಯಬೇಕು. ಪ್ರೊ. ಜಾಗಿರದಾರರು, ಈ ನಾಟಕವನ್ನು ನಾನು ಬರೆಯುವ ಮೊದಲು ನನ್ನ ಪರಿಚಿತವರಲ್ಲ. ನನ್ನ ಇದೊಂದು ನಾಟಕವನ್ನೋದಿ ಆಡಿಸಿ, ನನ್ನ ಸಲಗೆಯ ಸಹೃದಯರಾಗಿದ್ದಾರೆ; ಸಹೋದರರಾಗಿದ್ದಾರೆ. ಮಿಗಿಲಾದ ನಾಟಕಕಾರರೆಂಬ ಹೆಮ್ಮೆ ಇವರಿಗಿಲ್ಲ; ಮಿಕ್ಕವರನ್ನು ನಾಟಕಕಾರರನ್ನಾಗಿ ಮಾಡುವ ಹಮ್ಮೆ ಇವರಲ್ಲಿದೆ. ನನ್ನ ನಾಟಕವನ್ನು ಈ ಸಲದ ನಮ್ಮ ಕಾಲೇಜದ ವಾರ್ಷಿಕೋತ್ಸವದಲ್ಲಿ ರಂಗಭೂಮಿಗೆ ತಂದು ನಾಲ್ಕು ಜನರ ಬಾಯಲ್ಲಿ ನನ್ನ ಹೆಸರನ್ನು ಹೊಳಿದರು; ಈಗ್ಗೆ ಮುದುಕರ ಯಷ್ಟಿಯಂತಿರುವ ಮುನ್ನುಡಿಯಿಂದ ನನ್ನನ್ನು ಸಾಹಿತ್ಯದ ಸನ್ಮಾರ್ಗಕ್ಕೆ ಹಚ್ಚಲು ಹವಣಿಸಿದ್ದಾರೆ. ಇದಕ್ಕಾಗಿ ನಾನು ಅವರಿಗೆ ತುಂಬಾ ಆಭಾರಿಯಾಗಿದ್ದೇನೆ.

ಆದರೆ ನನ್ನನ್ನು ಪ್ರೊ. ಜಾಗಿರದಾರರಿಗೆ ಪರಿಚಯ ಮಾಡಿಕೊಟ್ಟು, ಪ್ರಯಾಸಬಟ್ಟು, ಪ್ರಯತ್ನಬಟ್ಟು ನನ್ನ ನಾಟಕವು ಶ್ರೇಯಸ್ಕರವಾಗುವಂತೆ ಹೆಣಗಾಡಿದ ಶ್ರೀ. ಕುಲಕರ್ಣಿ ಶ್ರೀನಿವಾಸರಿಗೆ ಎಂದಿಗೂ ಋಣಿಯಾಗಿರುವೆನು.

ಇಂತಹ ವೇಳೆಗೆ ಸುತ್ತಲಿನ ಸಂನಿವೇಶದಲ್ಲಿ ಬೆರೆತುಕೊಂಡು, ಅದನ್ನು ಬಿಡಿಯಾಗಿ ಅರಿತುಕೊಂಡು, ನಾಟಕರೂಪದಿಂದ ಅದನ್ನು ಇಡಿಯಾಗಿ—ಜನರ ಮನಸ್ಸನ್ನು ಹಿಡಿಯುವಂತಾಗಿ—ಕಾಣಿಸುವ ಕೈ ಚಳಕದ ಸಾಹಿತಿಗಳು ನಮಗೆ ಅವಶ್ಯವಾಗಿ ಬೇಕು. ಹೀಗೆ ನಮಗೆ ಬೇಕೆನ್ನಿಸುವ ಸಾಹಿತಿಗಳಲ್ಲಿ ಸೇರಿಕೊಳ್ಳುವ ಯೋಗ್ಯತೆಯು ಶ್ರೀ ಎನ್. ಕೆ ಕುಲಕರ್ಣಿಯವರಲ್ಲಿದೆ ಎಂದು ನಾನು ಸಂಕೋಚವಿಲ್ಲದೆ ಹೇಳ ಬಲ್ಲೆ. ಶ್ರೀ ಕುಲಕರ್ಣಿಯವರು ಇದೇ ಸಾಹಿತ್ಯ ಸಾಮ್ರಾಜ್ಯದಲ್ಲಿ ಕಾಲಿಡುವ ತರುಣರೆಂಬದನ್ನು ಲಕ್ಷ್ಯದಲ್ಲಿ ತಂದುಕೊಂಡರೆ ನನಗಾದ ಅಭಿಮಾನ-ಸಂತೋಷಗಳ ಕಲ್ಪನೆಯು ಓದುಗರಿಗಾಗಬಹುದು. ಇವರು ಮೇಲ್ತರಗತಿಯ ನಾಟಕಕಾರರಾಗುವರೆಂಬ ನನ್ನ ಭರವಸೆಯು ಬೇಗನೆ ಪೂರೈಸಲೆಂದು ಬೇಡಿಕೊಂಡು ಈ ಮುನ್ನುಡಿಯನು ಮುಗಿಸುತ್ತೇನೆ.

೮-೧೦-೩೪
ಮಾಳಮಡ್ಡಿ

ಶ್ರೀರಂಗ.

# ಬರೆದವನ ನುಡಿ.

ಪ್ರೊ. ಜಾಗಿರದಾರರು ಮುಖಸ್ತುತಿಗೆ ಮುನ್ನುಡಿ ಬರೆದಿರುವರೊ, ಇಲ್ಲವೆ ಇದರಲ್ಲಿ ಏನಾದರೂ ಹುರುಳಿರುವದೆಂದು ಇಷ್ಟು ಹೆಮ್ಮೆಯಿಂದ, ಬರೆದಿರುವರೊ, ವಾಚಕರೇ ತಿಳಿಯಬೇಕು. ಪ್ರೊ. ಜಾಗಿರದಾರರು, ಈ ನಾಟಕವನ್ನು ನಾನು ಬರೆಯುವ ಮೊದಲು ನನ್ನನ್ನರಿತವರಲ್ಲ. ನನ್ನ ಇದೊಂದು ನಾಟಕವನ್ನೋದಿ ಆಡಿಸಿ, ನನ್ನ ಸಲಗೆಯ ಸಹೃದಯರಾಗಿದ್ದಾರೆ; ಸಹೋದರರಾಗಿದ್ದಾರೆ. ಮಿಗಿಲಾದ ನಾಟಕಕಾರರೆಂಬ ಹೆಮ್ಮೆ ಇವರಿಗಿಲ್ಲ; ಮಿಕ್ಕವರನ್ನು ನಾಟಕಕಾರರನ್ನಾಗಿ ಮಾಡುವ ನಲ್ಮೆ ಇವರಲ್ಲಿದೆ. ನನ್ನ ನಾಟಕವನ್ನು ಈ ಸಲದ ನಮ್ಮ ಕಾಲೇಜದ ವಾರ್ಷಿಕೋತ್ಸವದಲ್ಲಿ ರಂಗಭೂಮಿಗೆ ತಂದು ನಾಲ್ಕು ಜನರ ಬಾಯಲ್ಲಿ ನನ್ನ ಹೆಸರನ್ನು ಹೂಳಿದರು; ಈಗ್ಗೆ ಮುದುಕರ ಯಷ್ಟಿಯಂತಿರುವ ಮುನ್ನುಡಿಯಿಂದ ನನ್ನನ್ನು ಸಾಹಿತ್ಯದ ಸನ್ಮಾರ್ಗಕ್ಕೆ ಹಚ್ಚಲು ಹವಣಿಸಿದ್ದಾರೆ. ಇದಕ್ಕಾಗಿ ನಾನು ಅವರಿಗೆ ತುಂಬಾ ಆಭಾರಿಯಾಗಿದ್ದೇನೆ.

ಆದರೆ ನನ್ನನ್ನು ಪ್ರೊ. ಜಾಗಿರದಾರರಿಗೆ ಪರಿಚಯ ಮಾಡಿ ಕೊಟ್ಟು, ಪ್ರಯಾಸಬಟ್ಟು, ಪ್ರಯತ್ನಬಟ್ಟು ನನ್ನ ನಾಟಕವು ಶ್ರೇಯಸ್ಕರವಾಗುವಂತೆ ಹೆಣಗಾಡಿದ ಶ್ರೀ. ಕುಲಕರ್ಣಿ ಶ್ರೀನಿವಾಸರಿಗೆ ಎಂದಿಗೂ ಋಣಿಯಾಗಿರುವೆನು.

ಈ ನಾಟಕವನ್ನು ಈ ಸಲದ ಕಾಲೇಜ ವಾರ್ಷಿಕೋತ್ಸವದಲ್ಲಿ ಆಡಿತೋರಿಸಿದ ನನ್ನ ಮಿತ್ರರನ್ನು ಕಡೆವರೆಗೆ ಕೊಂಡಾಡುತ್ತೇನೆ.

| | | |
|---|---|---|
| ಶಾಮು– (ಕವಿ) | | ಶ್ರೀ ಕುಲಕರ್ಣಿ ಎಸ್. ಕೆ. |
| ಶಾಂತಾ– (ಕವಿಯ ಹೆಂಡತಿ) | | ,, ಪಾಟೀಲ ಎಚ್. ಎಸ್. |
| ಪಾಟೀಲ– (S. S. ನ ಗೆಳೆಯ) | | ,, ದೇಸಾಯಿ ಜಿ. ಎಚ್. |
| ಎಸ್. ಎಸ್. (ಉಮೇದವಾರ) | | ,, ನಾಡಗೀರ ಎಸ್. ಜಿ. |
| ಬಸಂತ– ( ,, ) | | ,, ನಾಯಿಕ ಪಿ. ಕೆ. |
| ಕುಲಕರ್ಣಿ– | ಬಸಂತನ | ,, ಜೋಶಿ ಜಿ. ಎನ್ |
| ದೇಶಪಾಂಡೆ– | ಗೆಳೆಯರು | ,, ಕುಲಕರ್ಣಿ ಎನ್. ಕೆ. (ಲೇಖಕ) |
| ಹುಸೇನಿ– (ಕ್ಯಾಫೆದ ಆಳು) | | ,, ಗದಗ ಆರ್. ಎನ್. |

ಸೂಚನೆಃ– ಪಾತ್ರ ನಿರೂಪಣೆಯೆಲ್ಲ ಕಾಲ್ಪನಿಕವಿದ್ದು, ಸಮಾಜ ದಲ್ಲಿಯ ಯಾವವ್ಯಕ್ತಿಗೂ ಅನ್ವಯಿಸುವುದಿಲ್ಲ.

N. K. K.

## ಒಪ್ಪೋಲೆ :-

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೫ | (ಕೆಳಗಿನಿಂದ ೧೧) | ಮುಲಗಿ | ಮುಗಿಲ |
| ೭ | (ಮೇಲಿನಿಂದ ೭) | ಬಿಡ್ದು | ಬಿಡು |
| ೯ | ( ,, ೭) | ತಾಳಿತ | ತಾಳಿತ್ತ |
| ,, | ( ,, ೯) | ಸುಳಿಲೆತ | ಸುಳಿತಿತ್ತ |
| ,, | ( ,, ೯) | ಮತ್ತ | ಮತ |
| ೧೬ | (ಕೆಳಗಿನಿಂದ ೫) | ಕೊಡ್ತ | ಕೊಡ |
| ೨೦ | (ಮೇಲಿನಿಂದ ೯) | ಮತ್ರ | ಮತ್ತ |
| ೨೪ | ( ,, ೪) | ಅಂದ್ರ | ಅಂದ್ರ |

೨೬ (ಕೆಳಗಿನಿಂದ ೩ನೇ ಸಾಲಿನ ಕೆಳಗೆ —

‘ ದೇಶಪಾಂಡೆ — ಒಗಟಾ ಹಾಕಿ ಹೆಸರ ಹೇಳಿಧಂಗ ಮಾಡ್ತಿಯಲ್ಲೋ, ಹೇಳೊ ! ’ ಎಂದು ಕೂಡಿಸಿ ಓದಬೇಕು. )

# "ಇಲೆಕ್ಶನ್"



## ಪ್ರವೇಶ ೧

ಶಾರದಾತನಯ ಶಾಮನ ಮನೆ-ಅಲ್ಲ, ಅವನ ಶ್ವಶುರನ ಮನೆ. ಶಾಮನ ಓದುವ ಕೋಣೆ. ಒಂದು ಟೇಬಲ್, ಒಂದೆರಡು ಚೇರ್ಸ. ನಾಲ್ಕಾರು ಮಾಸಪತ್ರಿಕೆಗಳು ಹಾಗು ದೈನಿಕ ಪತ್ರಿಕೆಗಳು. ಟೇಬಲ್ ಮೇಲೆ ಒಂದು ದೌತಿ, ಲೆಕ್ಕಣಿಕೆ. ಶಾಮನೀಗ ಕವಿತೆ ಬರಿಯುತ್ತಿರುವನು. ತೊಟ್ಟಿದ್ದು ಖಾದಿಯ ಶರ್ಟು, ರಟ್ಟೆಯ ವರೆಗೆ ತೋಳು ಏರಿಸಿದ್ದಾನೆ, ತಲೆಯ ಮೇಲೆ ಟೊಪ್ಪಿಗೆ ಇಲ್ಲ.)

ಶಾಮ—ಇವತ್ತ ಇಡೀ ದಿವಸ ಸ್ಫೂರ್ತಿ ಬರವಲ್ದು ಯಾಕ ಬರವಲ್ದು? ಈಗಿಂದಿಂದಾಗ ಎಲ್ಲಾಕ್ಕೂ Pills ಹುಡುಕಿ ತಗದಾರ, ಅಂಥಾದು ಸ್ಫೂರ್ತಿ ಬರಲಿಕ್ಕೊಂದು Pills ಯಾಕ ಹುಡಕ್ಲಿಲ್ಲಾ ! ಇವತ್ತ ನನಗ ಸ್ಫೂರ್ತಿ ಬರದ ಇದ್ದ ಕಾರಣೇನು ! ಮಂಗಳವಾರದ ಸಂಯುಕ್ತ ಕರ್ನಾಟಕನಾರ ತಗದ ನೋಡ್ತೀನಿ, ವಾರದ ಭವಿಷ್ಯಾನ (ಸಂಯುಕ್ತ ಕರ್ನಾಟಕವನ್ನು ತೆಗೆದುಕೊಂಡು ಮೊದಲಿನಿಂದ ಓದತೊಡಗುವನು.) 'ಸಂಯುಕ್ತ ಕರ್ನಾಟಕ, ಇದರಲ್ಲಿ ಕನ್ನಡಿಗ ಪತ್ರಿಕೆಯೂ ಕೂಡಿದೆ.' (ಮತ್ತೊಂದು pageಉ ತಗೆದು) **'ಬೇಕಾಗಿದ್ದಾರೆ.'** 'Wanted' **ಪಾಹಿಜೇತ** ಒತ್ತಟ್ಗೆ ಬೇಕಾಗಿದ್ದಾರೆ. ಒತ್ತಟ್ಗೆ 'Wanted ಒತ್ತಟ್ಗೆ **ಪಾಹಿಜೇತ** ಬರೋಬರಿ, ಸಂಯುಕ್ತದ ಪೇಪರು! ಏನು ಬೇಕಾಗಿದ್ದಾರೆ? ವರರು ಬೇಕಾಗಿದ್ದಾರೆ. ನಮಗೇನ ಮಾಡುದು ತೊಗೊಂಡದನ್ನ. ಇರೂದ ಮಾವನಮನಿ, ವರರು ಬೇಕಾಗಿದ್ದಾರೆ, ಅಂತ ಒದರೀದ್ರ ನಮ್ಮ ಮಾವನ ಮಗಳು ಕಸಬರಿಗಿ ತಗೊಂಡ ಬರ್ತಾಳ.... ವಾರದ ಭವಿಷ್ಯ—ಹೂಂ.(ಮತ್ತೊಂದು pageಉ ತೆಗೆದು)ಕರ್ಕರಾಶಿ- ಮನಸ್ಸಿಗೆ ಅಸ್ವಸ

ಅದಕ್ಕ ನೋಡ್ರಿ ಸ್ಫೂರ್ತಿ ಬರವಲ್ದು!........... ಪ್ರಾಪಂಚಿಕಸುಖ ಉತ್ತಮ.... ಅದೇನೊ ಖರೆ ಆದ್ರ ಸ್ವಲ್ಪ ಕಷ್ಟದ! ಉದ್ಯೋಗದಲ್ಲಿ ಪ್ರಗತಿ........ ಎಲ್ಲಿ ಪ್ರಗತಿ ದುರ್ಗತಿನ ನಡದದ........... (ಪತ್ರವನ್ನು ಒಗೆದು)....ಈ Astrology ನಂಬೇಕೋ ನಂಬಾರ್ದೊ, ಆಂ? ಆದ ಹೆಂಗಸ್ಫೂರ್ತಿ ಬರೂದುಲ್ಲಾ ನೋಡೆ ಬಿಡ್ತಿನಿ.... ಹೇ ಕವಿತಾಮಾತೆಯೆ, ಬಾ! ನಿನ್ನ ಮಗನಿಗೊಂದಿನಿಸು ಸ್ಫೂರ್ತಿಯನ್ನು ಕೊಡು. ಉಳಿದ ಕವಿಗಳು ನಿನ್ನನ್ನು ಹೇ ರಮಣಿ, ಹೇ ನಲ್ಲೆ ಎಂದು ಸಂಬೋಧಿಸಿದರೂ ನಾನು ಮಾತ್ರ ನಿನ್ನನ್ನು ಕೇವಲ ಮಾತೆಯೆಂದೇ ಸಂಬೋಧಿಸುವೆನು.

(ಪಾಟೀಲನು ಪ್ರವೇಶಿಸುವನು.)

ಪಾಟೀಲ— Good morning. Mr. ShamaRao- ಮತ್ತೆ ಕವಿವರ್ಯರಾದ ಶಾರದಾತನಯ ಶಾಮನವರೇ ಶರಣು.

ಶಾಮ— ಅದೆಷ್ಟ ಚಾಷ್ಟಿ ಮಾಡ್ತಿಯೊ ಮಾಡ್ಪಾ.

ಪಾಟೀಲ— ಅಲ್ಲೊ ಶಾಮಾ, ಒತ್ತಟ್ಗೆ ಶಾರದಾತನಯ ಶಾಮಾ ಅಂತ ಬರೀತಿ; ಒತ್ತಟ್ಗೆ ಧಾರವಾಡ ಶಾಮರಾಯ್ರು ಅಂತ ಬರೀತಿ; ಇನ್ನೂ ಒತ್ತಟ್ಗೆ ಎಸ್. ರಾವ, ಅಂತ ಬರೀತಿ. ಇದೇನೊ ಸಾಹೇಬರ ಡ್ರೆಸ್ಸಿನ್ಹಂಗ ?

ಶಾಮ—ಹಂಗಲ್ಲೊ......ಕವಿತಾ ಬರದ್ರ, ಶಾರದಾತನಯ ಶಾಮ ಅಂತ ಬರೀತಿನಿ ನಾಟ್ಗಾ ಬರದ್ರ ಶ್ರೀ ಶಾಮ ಅಂತ ಬರೀತಿನಿ. ವಿಮರ್ಶಾ ಬರದ್ರ ಎಸ್. ರಾವ, ಅಂತ ಬರೀತಿನಿ. ನಿಮಗೇನ ತಿಳಿ ಬೇಕದೆಲ್ಲಾ.

ಪಾಟೀಲ—ತಿಳೀದಿದ್ರಿಲ್ಲಾ." ಈ ಸರ್ತೆ ಇಲೆಕ್ಶನ್ಗೆ ನಮ್ಮ ಎಸ್. ಎಸ್. ನಿಂತಾನ ಅವಗೊಂದು Vote ಹಾಕ್ಬಿಡ್ಪಾ. ಅವನ್ನ ಕೆಡಸಲಿಕ್ಕೆ ವಿರುದ್ಧ ಭಾಳಮಂದಿ ನಿಂತಾರ ಮತ್ತ.

ಶಾಮ—ಅಲ್ಲೊ ಅವಾ, ನಿಂತಾವ್ನ ಬಂದಿಲ್ಲಾ, ಅಂಥಾದು ನಿಮ್ದ ಭಾಳ ಜೋರ ನಡದದಲ್ಲೊ ?

ಪಾಟೀಲ–ಅವಾ ಬಂದ್ರ ಖರೇ ಏನು ? ನಿನ್ನಂಥಾವಾ ಹೀಂಗಂದ್ರ ಹೆಂಗೊ ? (ಕಾರ್ಡು ಕೊಡುತ್ತ) ಅವನ್ನ ಕಾರ್ಡೊಂದದ ನಾಕಪಾ.

ಶಾಮು—ಈಗಾಗ್ಗೆ ಕಾರ್ಡು ಛಾಪಿಸಿಬಿಟ್ರೇನು? ನಾವೊಂದು Poem ಅರ ಬರದ ಕೊಡ್ತಿದ್ನೆಲ್ಲೊ ಛಾಪಸಲಿಕ್ಕೆ ಬರ್‍ತಿತ್ತು. ಎಷ್ಟ space ಉಳದದ.

ಪಾಟೀಲ—ಅಲಾಲಲಾ, ಏನ ಕವಿಪಾ. ಸನ್ಯಾಸಿ ತಲಿ ವ್ಯಾಲ ಸುದ್ಧಾ ಕವಿತಾ ಬರಿಯಾವ ನೋಡ್ರಿ.

ಶಾಮು—ಇರ್ಲಿ ಬಿಡೊ. ನನ್ನ ಕವಿತಾ ಅಂದ್ರ ಅಷ್ಟ ಕಿಮ್ಮತ್ತಿಲ್ಲಾ ಅಂತ ಮಾಡೀಯೇನು? ಬಿಡು ಹೋಗ ಹಂಗಾರ

ಪಾಟೀಲ—ಛೆ ಹಂಗ ಮಾಡಬ್ಯಾಡಪ್ಪ.

ಶಾಮು—ನಾವ vote ಹಾಕಿದ್ರ ನಮಗೇನ ಹಂಗರ?

ಪಾಟೀಲ—ಅದಕ್ಯಾಕ ಕಾಳಜಿ ಮಾಡ್ತಿ ಬಿಡೊ. ಈ ಸರ್ತೆ Miscellany ವಳಗ ನಿನ್ನ ಕವಿತಾ ಮೊದ್ಲಗೆ ಛಾಪಿಸಿ ಕೊಡ್ತಿನಿ.

ಶಾಮು—Thank you. ನೋಡ ಮತ್ತ............ನೀ ಛಾಪಿಸಿ ಕೊಡ್ತಿನಿ ಅಂದ್ರ ನಾ ಈಗ್ಗಿಂದ ಒಂದು ಬೆಸ್ಟ ಕವಿತಾ ಬರೀಲಿಕ್ಕೆ ಸುರುವು ಮಾಡ್ತಿನಿ.

ಪಾಟೀಲ—Oh yes.

ಶಾಮು—ಮೊದ್ಲ ಹೇಳು ಘಟ್ಯಾಗಿ. ನಾ ನಾಕ ಮಂದ್ಯಾಗ ನನ್ನ Poem print ಆಗ್ತದ ಅಂತ ಹೇಳಿಕೊಂಡು, ನೀವ್ ಛಾಪಸಲಿಲ್ಲಾ ಅಂದ್ರ ಎಂಥಾ disgrace ನೋಡು. ಹಿಂದಾಗಡೆ ನಮ್ಮ honour keep-up ಮಾಡ್ಕೊಳಿಕ್ಕೆ ಮತ್ಯಾ magazine ದಾಗಾರ ಒಂದೆಂಟಣೆ ಖರ್ಚು ಮಾಡಿ ಛಾಪಸಬೇಕಾಗ್ತದ.

ಪಾಟೀಲ—ಮತ್ತ ಬಸಂತ್ಗ Promise ಮಾಡೀಯೇನು?

ಶಾಮು— ಛೆ! Imposs! ಅವನ್ಮುಂದ ಹೂಂ ಅಂದ್ರು ನಾ ಹಾಕೂದು ಕ- ಕ. ಗ.

ಪಾಟೀಲ—ಒಳಗೊಂದು ಹೊರಗೊಂದು ಮಾಡಬ್ಯಾಡಪ್ಪ ಹಂಗ-

ಶಾಮು—ಇಲ್ದಿದ್ರ Election ಆಗಬೇಕ ಹೆಂಗೊ? ಇದಕ್ಕ Election tactics ಅಂತಾರ........ಅಲ್ಲೋ ನಾವೊಂದು ನಾಟ್ಕಾ

ಬರ್ತೀನಿ, ಸ್ವಲ್ಪ ನಿಮ್ಮ Kanarese professorಗ ಹೇಳಿ ಒಂದ ಮುನ್ನುಡಿ ಬರಿಸಿಕೊಡಲ್ಲಾ.

ಪಾಟೀಲ—ಮುಗಸ್ದೇನಾ ನಾಟ್ಕಾ? ಆ ಸಕೇಶಿನ್ನೇನು ಶ್ರೀಧರಗ ಮದವಿ ಮಾಡ್ಸೊಳ್ಳಿ?

ಶಾಮು—Tragedy ಮಾಡಿದ್ನ್ಯೋ ಹೆಚ್ಚ Impressive ಆಗ್ಲಿ ಅಂತ.

ಪಾಟೀಲ— tragedy ಕಿಂತಾ Comic-satire ಛಲೋ ಅಲ್ಲೇನೋ?

ಶಾಮು—satire ಬರದ್ರ ಸಿಟ್ಟಿಗೇಳ್ತಾರ ಮಂದಿ....ಹೆಂಗಿದ್ರೇನೋ preface ಒಂದು ರಂಗಿದ್ರ ತೀರ್ತ ನೋಡು.

ಪಾಟೀಲ—ಅವು ಯೋಗ್ಯಿದ್ರ prefaee ಬರದಾಪಾರ........ಆದ್ರೂ ಬರೇ ಒಂದ preface ಬರದಾಕ್ಷಣಕ್ಕ ನಿನ್ನ works ಆಗ್ಗಿ certified ಅಂತ ತಿಳದಿಯೇನು?....ಈಗ್ಗಿಂದ ಅಷ್ಟು Romantic works ಬರೀತ ಬರಬ್ಯಾಡೊ. ನಾಳೆ ಮುದುಕಾದೆಂದ್ರ ಬರೀ ಅಂತ.

ಶಾಮು—ನಾ ಮುದುಕ ಆಗೂತಂಕಾ ಇರ್ತೀನಿ ಅಂತ ಯದರಮ್ಯಾಲಿಂದ? ತೊಗೊ ನಾಳೆ ನಾ ಸತ್ತೆ— ನಾಡದ ನನ್ನ works ಉಳಿತಾವಲ್ಲಾ?

ಪಾಟೀಲ—ಉಳಿತಾವ ಖರೆ, ಅದ್ರ ಹೆಸರಾಗಿ ಉಳಿತಾವಂತ ಯದರ ಮ್ಯಾಲಿಂದ? ಮೊನ್ನೆ ಯಾವದೋ ಒಂದ ಕಥಿ ಬರದಿದ್ದೆಲ್ಲಾ ಅದರ ಮ್ಯಾಲ್ಯಿನ ವಿಮರ್ಶ ಓದ್ದೇನು?

ಶಾಮು—ಅದು ನನ್ನ ಸಾಹಿತ್ಯದ ವಿಮರ್ಶಲ್ಲಾ, ನನ್ನ ವಿಮರ್ಶಾ. ನನ್ನ ಕಂಡ್ರ ಸಹನಾಗ್ದ ಇದ್ದಾವ್ರು ಬರದಿದ್ದಾರು. ನಾಯೇನು ಮಂದಿ ಸಲುವಾಗಿ ಬರಿಯೂದುಲ್ಲಾ, ತಿಳಿತ? ಮಂದೇನು ಬೇಖಾದ್ದಂತಾರ.... ಮಂದಿ ಬಾಯಿ ಹಿಡಿದು ಎಷ್ಟಂತ ಪೂರೈಸ್ತಾರ.... ಅಲ್ಲಾ ನನ್ನ ಸಾಹಿತ್ಯಕ್ಕ ವಿಮರ್ಶ ಬಂದದ ಇದ ಃ ನನ್ನ ಪುಣ್ಯಾ. ಬರೇ ಒಂದ ಕಾಗ್ಗಿ ಕಥಿ ಒಂದ ಗುಬ್ಬಿ ಕಥಿ ಬರದ್ರ ಯಾರು ವಿಮರ್ಶ ಮಾಡ್ಲಿಕ್ಕೆ ಹೋಗು

ದುಲ್ಲಾ. ಭಲೋ ಸಾಹಿತಿಗಳೊಳಗ ಗಣನಾ ಇದ್ರ ವಿಮರ್ಶ ಬರಿತಾರೇನ್ಪಾ.

ಪಾಟೀಲ—ಅದೆಲ್ಲಾ ನಮಗೇನ ಗೊತ್ತ ಮಾರಾಯಾ—ಮಂದಿ ಬೈದ್ರೂ, ಅದೂ ಒಂದು Compliment ಅಂತ. ಅಚ್ಛಾ ಹೋಗುಣ್ಪಾಯಿನ್ನ ನೋಡು ಮರೀ ಬ್ಯಾಡಾ.

ಶಾಮು — ಯೋ ಅಚ್ಛಾ! ಕರ್ನಾಟಕದಾವ್ನೊ ನೀನು. ಒಳ್ಳೇದು ಅನ್ನು Persian ದಾವ್ರ Contact ಹೆಚ್ಚಾದ್ಹಂಗ ಕಾಣಸ್ತದ ತಮಗ?

ಪಾಟೀಲ—ಅಲ್ಲೋ, "ಕರ್ನಾಟಕ ಕಾಲೇಜದಾವ್ರ" Fashion ಓ, ಆದೂ...........ಮರೀ ಬ್ಯಾಡ್ಪಾ ಇದ ೩ ಕಡಿಸರ್ತೆ ಹೇಳುದು........

ಶಾಮು—ಒಮ್ಮೆ Promise ಮಾಡ್ದೆ ಅಂದ್ರ ತೀರ್ತು.

ಪಾಟೀಲ—ಅಚ್ಛಾ, ಅಲ್ಲಾ ಒಳ್ಳೇದು ........ಕಾಳಜಿ ಮಾಡ ಬ್ಯಾಡಾ ನಿನ್ನ ಕವಿತಾ ಛಾಪಿಸಿ ಕೊಡ್ತೇನಿ. ನನಗ ಕೂಡ್ತದು ಮತ್ತಿನ್ನೇನು. (ಹೋಗುವನು.)

ಶಾಮು—(ಲಟಿಗೆ ಹೊಡೆಯುತ್ತ) ಮೊದ್ಲ ಸದ್ಯಾ ಒಂದು Best ಕವಿತಾ ಕಟ್ಟತಿನಿ (ಓಡಾಡುತ್ತ)

ಮುಲಗಿ ಮಾರಿಗೆ ರಾಗರತಿಯಾ ನಾಚ ಏರಿತ್ತ। ಆಗ ಸಾಜೆಯಾಗಿತ್ತ.।
ನೆಲದ ಅಂಚಿಗ ಮಂಜಿನ ಮುಸುಕು ಹ್ಯಾಂಗೊಬಿದ್ದಿತ್ತ। ಗಾಳಿಗೆ ವ್ಯಾಲಕ್ಯಾದಿತ್ತ।
ಕಾಮಿ ಬೆಕ್ಕಿನ್ಹಂಗ ಭಾಷಿ ಹಾದಿ........................

(ಹೀಗೆಂದು ಹಾಡುತ್ತ) ಕವಿ ಅನಬೇಕು ಅಂಬಿಕಾತನಯುದತ್ತ! ನಮಗ ಹದ್ನೈದ ದಿವಸಾದ್ರೂ ಎರಡ ಸಾಲ ಬರಿಯೂದಾಗ ವಲ್ದು; (ಪುನಃ ಮೇಲಿನ ಕವಿತೆಯನ್ನು ಹಾಡುತ್ತ)...............ಅವರ 'ತುತ್ತಿನ ಚೀಲಾ' ಏನ ಕವಿತಾ ಅದು! ಬಡವರ ಕರಳನೊಳಗ ಹೊಕ್ಕು ಕೂಗ್ಯಾರ! ಬೇಕು! ಬಡತನಾ ಬೇಕು! (ಕಾವ್ಯ ಮಗ್ನನಾಗಿ) ಹೇ ದಯಾನಿಧೆ! ಹೇ ಕರುಣಾರ್ಣವಾ! ಹೇ ಕಾರುಣ್ಯ ಸಿಂಧು! ನನಗೆ ಯಾವಾಗಲೂ ಬಡತನವನ್ನೇ ಕೊಡು. ಬಡತನದ ಕಟು ಅನುಭವವನ್ನು ಸವಿದೂ ಸವಿದೂ ಬಡತನದ ಕಷ್ಟವನ್ನು ಸೂಸು

ವಂಥ ಸಾಹಿತ್ಯಗಳನ್ನು ಹೊರಪಡಿಸುವೆನು, ಹೆಸರು ಪಡೆಯುವೆನು.... ಕವಿಗಳು ಯಾವಾಗಲೂ ಕಷ್ಟವನ್ನೇ ಕೋರುತ್ತಾರೆ—ಯಾಕೆ? ಹೆಸರಾದ ಕವಿಗಳಾಗಲಿಕ್ಕೆ ತಮ್ಮ ಸಾಹಿತ್ಯಗಳು ಹೆಚ್ಚಿನ ಬೆಲೆಗೆ ಮಾರಾಟವಾಗಲಿಕ್ಕೆ....ಮನಿಯಲ್ಲಿ ಯಾರಾದರೂ ಸತ್ತರೆ ಈ ಕವಿಗಳಿಗೆ ಎಂತಹ ಸ್ಫೂರ್ತಿ! ತಮ್ಮ ಪ್ರತಿಭೆಯ Parade ಮಾಡಲಿಕ್ಕೆ ಒಳ್ಳೇ ಸುಸಂಧಿ. ನನಗೂ ಇಂತಹ ಪ್ರಸಂಗಗಳು ಮೇಲಿಂದ ಮೇಲೆ ಬಂದರೆ ನಾನೂ ಒಬ್ಬ ದೊಡ್ಡ ಕವಿಯಾಗಲಿಕ್ಕಿಲ್ಲವೆ? ಹೆಸರು ಪಡೆಯಲಿಕ್ಕಿಲ್ಲವೆ?.... ಆನಂದವನ್ನು ಹೊಂದಿದಾಗ ಕವಿಯು ಕಾವ್ಯ ಬರೆಯುವನಂತೆ—ಸತ್ತಾಗೆಲ್ಲಿ ಆನಂದ ಬರಬೇಕ್ರಿ!....ಭಾವಗಳ ಭಾಷೆಯಂತೆ ಕವಿತೆ,— ನಮಗ ನಮ್ಮ ಭಾವಿಲ್ರಿ! ಭಾವಿಲದಿದ್ರ್ಯೂ ಮಾವಿದ್ದಾನ, ನಮ್ಮ ಟುಕುಂಬ ಇದ್ದಾರ! ಯಾಕ ಬರಬಾರ್ದು ಸ್ಫೂರ್ತಿ! ಬೇಕದಕ್ಯೂ ನಸೀಬಾ.

(ಶಾಂತಾ ಪ್ರವೇಶಿಸುವಳು.)

ಶಾಮು—(ಹೆಂಡತಿಯನ್ನು ನೋಡಿ) ನಮ್ಮ ಸ್ಫೂರ್ತಿ ಬಂತು! (ಸ್ವಗತ) ಎಲಾ ನಮ್ಮ ಟುಕುಂಬುಕ್ಕು ಸ್ಫೂರ್ತಿ ಬಂಧಾಂಗ ಕಾಣ್ತದಲ್ಲಾ! (ಪ್ರಕಾಶ) ನಲ್ಲೆ, ನಿನ್ನ ಬೆಡಗನ್ನು ನಾನು ಎಷ್ಟೆಂದು ಬಣ್ಣಿಸಲಿ? ಆ ನಿನ್ನ ಬಿಲ್ಲಿನಾಕಾರದ ಹುಬ್ಬುಗಳು ನನ್ನೆದೆಗೆ ನನೆವಿಲ್ಲಿನ ಬಾಣವನ್ನೇ ಬಿಡುತ್ತವೆ, ನಿನ್ನ ನೋಟವನ್ನೇ ಬಾಣವನ್ನಾಗಿ ಮಾಡಿ ಆ ನಿನ್ನ ಕೆಂದುಟಿಗಳು. ಆ ಕೆನ್ನಾಲಿಗೆಯು, ಆ ಕೆಂಪಲ್ಲುಗಳು, ನೀನು ನನ್ನನ್ನು ಬಿಟ್ಟು ಎಲೆ ಅಡಕೆ ಹಾಕಿಕೊಂಡಿರುವಿಯೆಂದು ಸ್ಪಷ್ಟವಾಗಿ ಹೇಳುತ್ತವೆ.

ಶಾಂತಾ—ಸಾಕು ಮುದುಕಾದ್ರೂ ಬುದ್ಧಿ ಬರೂ ಹಂಗಿಲ್ಲಾ.

ಶಾಮು—ನಾನು ಮುದುಕನಾದರೂ ನನ್ನ ಕವಿತ್ವವು ಎಳೆಯದೇ. ನಲ್ಲೆ, ನಿನ್ನನ್ನು ಏನೆಂದು ಸಂಬೋಧಿಸಲಿ, ವಿಮಲೆ, ಕಮಲೆ, ಕೌಮುದಿ ಎಂದು ಸಂಬೋಧಿಸಲೋ ಅಥವಾ ಅಚ್ಚಗನ್ನಡದಲ್ಲಿ, ಚನ್ನೆ, ನೈದಿಲೆ, ತಾವರೆ, ಸೀಲೆ, ಹಳದೆ ಎಂದು ಸಂಬೋಧಿಸಲೊ....ನಿನಗ ಅತ್ತಿಮನಿ ಹೆಸರು ಇಡಬೇಕಾರ ನನಗ ಸ್ಫೂರ್ತಿ ಬರಲಿಲ್ಲ ನೋಡು.ಬಂದಿದ್ರ ತಾವರಮಾ

ಅಂತ ಹೆಸರಿಟ್ಟ ಬಿಡತಿದ್ದೆ. ನನಗ ತುಂಬಪ್ಪಾ, ಇಲ್ಲಾ ಭೃಂಗಪ್ಪಾ ಅಂತ ಇಟಗೋತಿದ್ದೆ. ಅದೆಲ್ಲಾ ಬಿಟ್ಟು ನಮ್ಮವ್ವಾ ಸುಟ್ಟ ಸುಡಗಾಡು ಶಾಂತಾ ಅಂತ ಇಟ್ಲು ........ಅತು ವೈದಿಕ್ಕ ಬ್ರಾಂಬರ ಕನ್ಯಾಕ್ಕ ಅವ ಹೆಸರ ಯೋಗ್ಯಾ.

ಶಾಂತಾ—(ಕರಳಿ) ವೈದಿಕ್ಕ ಬ್ರಾಂಬರ ಕನ್ಯಾ ಮಾಡಕೊಂಡ್ರ್ಯಾಕ ಹಂಗರ?

ಶಾಮು— ನಿಮ್ಮಪ್ಪಾ ಕೊಟ್ಟಾ ಅಂತ ಮಾಡಕೊಂಡೆ. ಬಿಡು ಹಂಗರ

ಶಾಂತಾ—ಹಂಗ ಸೈ ಎಷ್ಟ ಮಾಡಿದ್ರೂ ನಿಮ್ಮ ಆಡೂದೇನು ತಪ್ಪ ಹಂಗಿಲ್ಲಾ. ನಿಮ್ಮ ಕಾಲೇಜ ಖರ್ಚು, ಅರಿವಿ ಖರ್ಚು, ಅಂಚಡಿ ಖರ್ಚು, ಫೀಖರ್ಚು, ಪುಸ್ತಕ ಖರ್ಚು...., ಮ್ಯಾಲೆ ನಿಮ್ಮ ಹಜಾಮತಿಗೆ ಸುದ್ಧೆ ನಾಕಣೆ ಕೊಡಬೇಕು

ಶಾಮು—ಯಾರುಪಗಾರಕ್ಕ ಕೊಡತಾನ ಮಗಾ. ವರದಕ್ಷಿಣಾ ಬದ್ಲಿ B. A. ತಂಕಾ ಕಲಸ್ತಿನಿ ಅಂದಾ, ಹೂಂ ಅಂತೆಂದೆ. ಈಗ ಬರೇ B. A. ಆದ್ರೂ ಯಾರು ಮಾತಾಡ್ಸುದುಲ್ಲಾ. ವರ್ಷಾ ಸಾವಿರಾರ ಮಂದಿ B.A ಆಗ್ತಾರ ಅದಕ್ಕ Foreignಗೆ ಹೋಗಿ ಬರ್ತಿನಿ ಒಂದ ಎಂಟ ಹತ್ತ ಸಾವಿರ ರುಪಾಯಿ ಬೇಕಂತ ಹೇಳು...... ಮತ್ತ ಕಳವೂಟದಾಗ ಸಿಟಗೊಂಡ ಕೂತದ್ದು—ಉಂಗ್ರಾ ಅಳೇ ತಂದಾಗಿಂದೂ Wrist-Watch ಉ......ನೂಲ ಹುಣ್ವ್ಯಾಗಿಂದು—ಬೆಳ್ಳಿ ತಾಬಾಣಾ........ ಇಷ್ಟೆಲ್ಲಾ Dues....ಅವ ನಿಮ್ಮಪ್ಪನ ಮ್ಯಾಲೆ. ಮುಂದಿನ ತಿಂಗ್ಳ ಅಂಬೂದ್ರಾಗ ಎಲ್ಲಾ Clear ಮಾಡಂತ ಹೇಳು

ಶಾಂತಾ— ಹೂಂ ನಿಮ್ಮ ಹೊಟ್ಗೆ ಹಾಕಬೇಕು, ಮತ್ತ ಅದು ಕೊಡು ಇದು ಕೊಡು ಅಂತ ಕರಕರ ಮಿಂಡ್ಯಾರ್ಥಂಗ ಇದ್ದದ್ದ.

ಶಾಮು—ಮತ್ತ ಮಗ್ವಿ ಮಾಡಕೊಂಡದ್ದೇನು ಪುಕಟೇನು ? ಮಗಳ್ನ ಕೊಟ್ಟಾನ, ಕೊಡ್ತಾನ, ಕೊಡದಿದ್ರ ದಾವೆ ಮಾಡಿ ತೊಗೊತಿನಿ.

ಶಾಂತಾ—ಮೊನ್ನೆ ನಾಟಕದಾಗ ನೋಡ್ಲಿಲ್ಲ! ಅವಾ ಹೆಂಗ ಹೇಳ್ತಿದ್ದಾ ವರದಕ್ಷಿಣಿ ತೊಗೊಬಾರ್ದು ಅಂತ!

ಶಾಮ—ನಾಟ್ಗಾ ಬರದಾವಂದೇನ ಗಂಟೆ ಹೋದೀತು! ಆ ಬರದಾವನ್ನ ಕೇಳು ತಾ ಬಿಟ್ಟದ್ರೊ ಹೆಂಗ? ನಾನೂ ಬರೀತಿನಿ ಹಂಗ. ಅಂದ್ರ ಆದು ಖರೆ ಅಂತ ತಿಳಕೊಬೇಕೇನು? ಹೇಳಿಕೇಳಿ ನಾಟ್ಗಾ...........ನಾಳೆ ನಿಮ್ಮಪ್ಗ ಛಲೋತ್ನ್ಯಾಗಿ Warning.... ಮಾಡು ಲಗೂನ Clear ಮಾಡಂತ.

ಶಾಂತಾ—ಇಲ್ದಿದ್ರ?

ಶಾಮ—ಅಂ? ಇಲ್ದಿದ್ರ? ಇಲ್ದಿದ್ರ ದಾವೇ ಮಾಡ್ತಿನಿ. ನಿನಗ ಸೋಡಚೀಟಿ........ಅಲ್ಲಾ ದಾವೆ ಮಾಡ್ತಿನಿ ಅಂದೆ.

ಶಾಂತಾ—ಮತ್ತೇನ ಮಾಡ್ತಿರಿ ? (ಸಿಟ್ಟಿಗೇಳುವಳು)

ಶಾಮ—ಹೂಂ....(ಸ್ವಗತ) ಸ್ಫೂರ್ತಿ ಬಂತು. ಪ್ರಸಂಗ ಮಾತ್ರ ಕಠಿಣ ಆದ (ಪ್ರಕಾಶ) ಚನ್ನೆ, ಚಾಮುಂಡೆ, ಚಲುವನ್ನು ಸೂಸುವ ನಿನ್ನ ಮೊಗವು ಸಿಟ್ಟಿಗೆದ್ದರೂ ಒಂದು ಬಗೆಯ ಸೊಬಗನ್ನೇ ಸೂರೆ ಮಾಡುತ್ತದೆ. ಹುಬ್ಬುಗಂಟಿಕ್ಕಿದ ಆ ಕಣ್ಣುಗಳು ಪ್ರೇಮಾಮೃತ ಮಳೆಯನ್ನೇ ಸುರಿಸುತ್ತವೆ. ಮೋಡದಂತಹ ಕಣ್ಣುಗಳಿಂದ ನಿನ್ನ ವಕ್ರ ನೋಟದ ಮಿಂಚು ಝುಳಪಿಸುತ್ತಿರುವಾಗ....ಹೀಗೆಯೆ ನಿಲ್ಲು: ಕಾವ್ಯದಲ್ಲಿಯೇ ನಿನ್ನ ಚಿತ್ರವನ್ನು ಬರೆಯುವೆನು

ಮುಗುಳು ಮೊರೆಗೆ ರಾಗರಸಾ ರಮ್ಯವಾಗಿತ್ತ । ಆಗ ರಾತ್ರಿಯಾಗಿತ್ತ ।

(ಸ್ವಗತ) ಎಲಾ! ಈಗಾರ ಹಗಲಾಗೆದಲ್ಲಾ! ರಾತ್ರಿ ಬಿಟ್ರ್ಯಾರ ನಮ್ಮ Alliteration ತಪ್ಪತದ! ಹೋಗ್ಲಿ ಕವಿತಾ ಬರದಿಂದ ಎಷ್ಟೊತ್ತಾಗಿತ್ತು ಅಂತ ಯಾ ಮಗಾ ಕೇಳ್ತಾನ. ಈಗ ಅಂಬಿಕಾತನಯದತ್ತ ಆಗ ಸಂಜೆಯಾಗಿತ್ತ ಅಂತ ಬರದಾರ ಆಗ ಸಂಜೀನ ಆಗಿತ್ತು ಅಂತ ಎದರ ಮ್ಯಾಲಿಂದ? ನಂಜೇರಿತ್ತು ಆದಕ್ಕ ಸಂಜ್ಯಾತು—ನಮ್ದು ರಮ್ಯಾಗೇದ ರಾತ್ರ್ಯಾತು (ಪ್ರಕಾಶ) ಇದೊ ಈ ನಿನ್ನ ಸಿಟ್ಟಿನ ಸಮಯವು ಈ ಕವಿಗೆ ಎಂತಹ ಸ್ಫೂರ್ತಿಯನ್ನು ಕೊಟ್ಟಿತು! ನೀನು ದಿನಾಲು ಹೀಗೆಯೆ ಸಿಟ್ಟಿಗೆದ್ದರೆ ನಾನೊಬ್ಬ ದೊಡ್ಡ ಕವಿಯಾಗಲಿಕ್ಕಿಲ್ಲವೆ? ಹೆಸರು ಪಡೆಯಲಿಕ್ಕಿಲ್ಲವೆ? ಶಾರದಾತನಯ ಶಾಮನೆಂದು ಅಳಿಸಿ ಶಾಂತಾನಾಥ ಶಾಮನೆಂದು ಇಟ್ಟುಕೊಳ್ಳುವೆನು....(ಸ್ವಗತ) ಈ ಹೆಂಗಸೂರ ಸಿಟ್ಟು ಹಿಡಿ

ಯೂದು ಹಾವಿನ ಹೆಡಿ ಹಿಡಿಯೂದು ಒಂದ. ವೈದಿಕ್ಕ ಬ್ರಾಂಬರ್ಗೆ ಔತ್ಣಾ ಕೊಟ್ಟಂಗ ಪುರಸತ್ತಿಲ್ದ ಬರ್ತದ (ಪ್ರಕಾಶ) ಹೇ ಪ್ರಚಂಡನಲ್ಲೆ, ನಿನ್ನ ಕೊಪಾಗ್ನಿಯು ಇನ್ನೂ ಶಾಂತವಾಗಲಿಲ್ಲವೆ? ಹಾಗಾದರೆ ಈ ಕವಿಯು ತನ್ನ ಕಾವ್ಯವನ್ನು ಪೂರ್ತಿಗೊಳಿಸುವನು.

ಮುಗುಳು ಮಾರಿಗೆ ರಾಗರೂಪಾ ರಮ್ಯವಾಗಿತ್ತ। ಆಗ ರಾತ್ರಿಯಾಗಿತ್ತ।
ತಲೆಗು ಅಂಚಿಗೆ ಸೀರಿಯು ಮುಸುಕು ಹ್ಯಾಂಗಬಿದ್ದಿತ್ತ। ಸಿಟ್ಟಿಗೆ ಹಿಂದಕ ಹಾರಿತ್ತ।

ಪೂರ್ಣಚಂದ್ರನ ಕಮಲದ ಮೊಗವು ರೋಷವತಾಳಿತ್ತ। ರೋಷದ ಜೊನ್ನವಕಾರಿತ್ತ।
ಸೊಗಸಿನಿಂದಲಿ ಸೋಗಿನ ಹೆಣ್ಣು ಎದುರಿಗೆ ನಿಂತಿತ್ತ। ಟಕಮಕ ನಲ್ಲನ ನೋಡತಿತ್ತ।
ಕಾಮಿಬೆಕ್ಕಿನ್ಹಂಗ ಭಾಮೆಯು ನಗಿಯು ಬಾಯಾಗ ಉಳಿತಿತ್ತ ಮತಮತ್ತ ಹಿಂದಕ ಉಳಿತಿತ್ತ।

ಅಹಾಹಾ. ಎಂಥಾ ಕಾವ್ಯ ರಚಿಸಿದೆ ಇಂತಹ ಕವನವನ್ನು ಹೊರ ಹೊಮ್ಮಿಸಲು ಸಹಾಯ ಮಾಡಿದ ನಿನಗೆ ನಾನು ತುಂಬಾ ಆಭಾರಿಯಾಗಿದ್ದೇನೆ. (ಸ್ವಗತ) ಈ ಸರ್ತಿ ಇದನ್ನ Miscellanyಗೆ ಕೊಟ್ಟ ಬಿಡ್ತೇನಿ, 'ನಲ್ಲೆಯ ಸಿಟ್ಟು' ಅಂತ ಹೆಸರಿಟ್ಟು.

ಶಾಂತಾ– ಹೌದು ಬರೇ ತೋರ್ಕಿ ಮಾತ ಆತು. ಮದಿವ್ಯಾಗಿ ಮೂರು ವರ್ಷಾದ್ರೂ ಒಂದ ಸೀರಿ ತರೂದಾಗಲಿಲ್ಲಾ ನಿಮ್ಮ ಹಣೇಬಾರ್ಕ.

ಶಾಮು– ನಮ್ಮ ಮನಿಗೆ ಬಂದ್ರೂ ಆ ವೈದಿಕ್ಕ ಬ್ರಾಂಬರ ಪಾಯಾ ಬಿಟ್ಟೇಯಿಲ್ಲೇನೂ ಸೀರೆಂತ ಸೀರಿ. ನಮ್ಮ College Lady Students ನೋಡು. ಕೈಯಾಗ ಎರಡೇ ಎರಡ Levender ಒಳ್ಳಿ, ಒಂದ ಪಾತಾಳು, ಒಂದಬ್ಲೋವಜ

ಶಾಂತಾ– ಸಾಕು. ನಿಮ್ಮ ಕಾಲೇಜದಾಗಿನ ಹೆಂಗಸೂರ ಸುದ್ದಿ ತೆಗೀಬ್ಯಾಡ್ರಿ. ಸಕ್ಕೇಶ್ಯಾರ್ಹಂಗ ಎಲ್ಲಾ ಹಸರ ಹಣೀಲೇನ ಬರ್ತಾವ ಸುಡ್ಲಿ.

ಶಾಮು– ನಾಯೇನು ಅವ್ರಹಣಿ ನೋಡಂನ್ಯೇ ಏನ ಸಿಸ್ತ ನೊಡಂನ್ಯೇ?

ಶಾಂತಾ– ಯಾವಾಗ ನೋಡಿದ್ರೂ ಇಂಥಾ ಹುಚ್ಚುಚ್ಚಾರದ ಮಾತ. (ಸಿಟ್ಟನ್ನು ಅಳಿಸಿ) ಅಲ್ಲಾ ನೀವಿಷ್ಟ ಹಾಡಕಟ್ಟತಿನಿ ಅಂತೀರಿ, ನಾಳೆ

ನಮ್ಮ ಅಬಚಿ ಮಗಳ ಲಗ್ಗಂದಾಗ ಒಂದನಾಕು ಬೀಗರ ಹಾಡಾರ ಕಟ್ಟಿಕೊಡ್ರೆಲ್ಲಾ.

ಶಾಮು- ಏನು ? ಬೀಗ್ರ ಹಾಡಕಟ್ಕೊ ಕವೀನ ನಾ ?........ ಅಲ್ಲಾ ಹಾಡ್ನ್ಯಾಗ ಬೈಯೂದರಕಿಂತಾ ಝುಳಾ ಝುಳಾ ಇದರ್ಗೇನ ಮಾತಾಡಿ ಬಿಟ್ರ ಹೆಚ್ಚ Impressive ಆಗ್ಲಿಕ್ಕಿಲ್ಲ ? "ನೀವ ಕೆಟ್ಟಿದ್ದೀರಿ, ನಿಮ್ಮಳ್ಯಾ ಖರ್‍ರಗಿದ್ದಾನ, ನಿಮಗಡಿಗಿ ಮಾಡ್ಲಿಕ್ಕೆ ಬರೂದುಲ್ಲಾ ನಿಮ್ಮನ್ನ ಹೊಡಿತಿವಿ ಬಡಿತಿವಿ" ಅಂತ. ಬೀಗ್ರ ಹಾಡು ಅಂದ್ರ ಎನ್ ಗಂಡ್ಸ್ಯಾವ್ರ ಹೆಣ್ಯಾವ್ರ ನಡವೆ Scratch match ಏನು ?

(ಒಳಗಿನಿಂದ 'Sham Rao.' ಎಂದು ಕೂಗುವರು.)

ಓ ಬಂದೆ. ಈ Election ಗೊಂದ್ಲ ತೀರೂತಂಕಾ ನಮ್ಮ ಸಂಸಾರೇನು ಸುಸೂತ್ರ ಸಾಗೂಹಂಗಿಲ್ಲಾ.

ಶಾಂತಾ—ನಾ ಹೇಳಿದ್ದು ಲಕ್ಷ್ಯಕ್ಕ ಬರಲಿಲ್ಲೇನು?

ಶಾಮು- ಬಂದದ, ಸ್ಫೂರ್ತಿ ಬಂದಾಗ ನೆವಪ ಮಾಡು.

ತೆರೆ.

## ಪ್ರವೇಶ ೨

(Collage Cafeದ ದೃಶ್ಯ ಬಸಂತ ಮತ್ತು ಅವನ ಗೆಳೆಯ ಕುಲಕರ್ಣಿ ಕುಳಿತಿರುವರು. ಹುಸೇನಿಯು ಟೇಬಲ್ ಸಾಫ ಮಾಡುತ್ತಿರುವನು. ಬಸಂತನು ಸೂಟಿನ ಉಡುಪಿನಲ್ಲಿರುವನು.)

ಬಸಂತ - ಉಶ್ (ಉಸುರುಗರೆಯುತ್ತ ವಸ್ತ್ರದಿಂದ ಮುಖ ಒರಿಸಿಕೊಳ್ಳುತ್ತ) ಓಡ್ಯಾಡಿ ಓಡ್ಯಾಡಿ ಕಾಲಂಬೂವು ಸೋತ ಹೋದ್ವು ಇಷ್ಟ ಓಡ್ಯಾಡಿದ್ರೂ ಒಂದ ಇಪ್ಪತ್ತ Votes ಏನೂ ಸಿಗಲಿಲ್ಲಾ.

ಕುಲಕರ್ಣಿ—ಆ ಇಪ್ಪತ್ತ ಮಂದ್ಯಾಗೂ ಖರೇ ಮನಸ್ಲೆ ಹೂಂ ಅಂದಾವ್ರು ಎಷ್ಟ ಮಂದ್ಯೊ ಏನೊ!

ಬಸಂತ—ಅವಾ ಆ S. S. ನಿಂತ ಕಾರ್ಣೇನಂತ ಮಾಡಿದ್ನೀ. ಖರೇ ನನ್ನ ಕೆಡಸಬೇಕ ಅಂಬು ಉದ್ದೇಶದಿಂದ ನಿಂತಾನ್ನೋಡು. ತಾ ಬರದಿದ್ರೂ ಅಷ್ಟ ಹೋತು ಬರಾವ್ರ್ನ ಬರಗುಡಸಬಾರ್ದು ಅಂತ.

ಕುಲಕರ್ಣಿ— Candidates ಆರ, ಎಷ್ಟ ಮಂದಿ ಇದ್ದಾರೊ?

ಬಸಂತ—ಮಾರಾಯಾ ಒಂದ ಒಂದ Cricketಗೆ.... .... ಒಂಭತ್ತ ಮಂದಿ. ನಿಂದರ್ಲಿ, ಇಷ್ಟ ಮಂದ್ಯಾಗೂ ನಾ ಆರಿಸಿ ಬರದಿದ್ರ ಈ ಮಂಡಮಿಸ್ಯಾಕ! ನಾ ಬರದಿದ್ರ ಮತ್ಯಾರ ಬರಬೇಕೊ? (ಸಿಗರೇಟು ಹೊತ್ತಿಸುವನು)

[ದೇಶಪಾಂಡೆ ಪ್ರವೇಶಿಸುವನು]

ದೇಶಪಾಂಡೆ—ನಮುಸ್ಕಾರ್ರಿ Mr. Basant.

ಬಸಂತ—ಇನ್ನಾರ ಒಂದಿಷ್ಟು Good morning ಅನ್ನಾ, ಕಾಲೇಜಿಗೆ ಬಂದಿ. ಆ ಹಾಯಸ್ಕೂಲ ಪಾಯಾ ಬಿಡಿನ್ನ ದೇಶಾವರಾ ಬೇಡ್ಲಿಕ್ಕೆ ಬಂದಾವ್ರ ಹಂಗ ನಮುಸ್ಕಾರ್ರಿ ಅಂತ ಅಹಾಹಾಹಾ, ಈ ಧೋತ್ರಾ ಈ ಕೆರವುಬಿಡಪಾ ಯಿನ್ನ, ನೋಡ್ಲಾರೆ ಯಾವಾಗ, Adam & Eve ನ ಕಾಲಕ್ಕ ತೊಗೊಂಡಿದ್ಯೊ ಏನೊ!..........ಸಿನೇಮಕ್ಕೇನು ನೆಲದ ತಿಕೀಟು ತೊಗೊಂಬುದ ಬಿಟ್ಟೇಯೋ?

ಕುಲಕರ್ಣಿ—ಅಲ್ಲೊ ಬಸಂತಾ ಕಾಲೇಜಿಗೆ ಬಂದ್ರ, ಡೌಲ ಮಾಡ್ಲಿಕ್ಕೆ ಬೇಕು ಅಂತ ರೂಲೆಲ್ಲದಪಾ?

ಬಸಂತ—ವಾ, ರೂಲಂತಿಲ್ಲ! ಆದೊಂದ Convention ಪಾ. ಆದೊಂದ ಪೊರ್ಶ್ಯಾಲಿಟಿ! ಹಂಗರ ನಮುಗ ಹಾಯಸ್ಕೂಲನ್ಯಾವ್ರಗೆ Difference ಏನ್ನಾ. ಹೊಡಿಬೇಕನೋಡ ಚೇನಿ! College-life ಅಂದ್ರ ಏನಂತ ಮಾಡಿದಿ? Paradise Regained!!

ದೇಶಪಾಂಡೆ—ಇನ್ನೂ ನೆಳ್ಳ ಬಿದ್ದಿಲ್ಲಾ ತಮ್ಮಂಥಾವ್ರದು.

ಬಸಂತ—ಬನ್ನೋಡ್ರಿಪಾ ಇವಾ ಸಾಕ್ರೆಟೀಸಾ (ಕುಲಕರ್ಣಿಗೆ) ಅಲ್ಲೋ ಕುಲಕರ್ಣಿ ನಿನ್ನೆ ಐದ ಘಂಟೇದ ಕಡೆ ನಮ್ಮ Room ಗೆ ಬರ್ತೇನಿ ಅಂದಿದ್ದಿ ಬರಬಾರ್ದೆನ್ನಾ? I waited for you till six!

ಕುಲಕರ್ಣಿ—ನಿನ್ನೆ ಗೊತ್ತಿಲ್ಲೇನು ಗುರುವಾರಾ Workshopಊ ಆರರ ತಂಕಾ ಮೊದ್ಲೊಮ್ಮೆ Experiment ಮಾಡಿದ್ದೆ ಆಷ್ಯಾಲ ಮತ್ತ Repeat it ಅಂತ ಕೊಟ್ಟ ಮಾರಾಯಾ.

ಬಸಂತ—ಯೇಳೋ ನಿನ ನಾ, F. Y. ದಾಗಿದ್ದಾಗ ಒಂದಾರ Experiment ಮಾಡಿಲ್ಲಾ.

ದೇಶಪಾಂಡೆ—ಅದ್ಹೆಂಗೊ?

ಬಸಂತ--ಇಷ್ಟ ತಿಳಿಯೂದುಲ್ಲೇನೊ? ಪಿಯೂನ್ಗ ಒಂದ ಚಾರಣೆ ಒಗದ್ರ Journal ಮನಿಗೆ ಒಯ್ಯಲಿಕ್ಕೆ ಕೊಡ್ತಾನ. ರಾತ್ರಿ ಯಾವಾರ ಹಳೆ Journal ನೋಡಿ copy ಮಾಡಿಕೊಟ್ರಾತಪಾ. ಬಿದ್ವ ಎಂಟೂವರಿ ಮಾರ್ಕ್ಸ್! ಇನ್ನೂ ಇಷ್ಟ ಯಾಕಪಾ F. Y. ದಾಗ ಮತ್ತ Science ಪೇಪರು White ಕೊಡದಿದ್ರ 2nd. Class ಬರ್ತಿದ್ದೆ! ಹುಡಗನ್ನ ವಶೀಲಿ ಅಂದ್ರ ಏನಂತ ಮಾಡೀದಿ? English poetry paperಉ ಮೊದ್ಲ out ಮಾಡಿದ್ದೆ ನಾಯಂಥಾ ಮಗಾ ಬೇಕದಕ್ಕೂ Faculty!

ದೇಶಪಾಂಡೆ-- Inter ಯಾಕೊ ಯಾತ್ರಾ ನಡಧಂಗ ಕಾಣಸ್ತದ!

ಬಸಂತ—Administration ದಾಗ ಐದ ಮಾರ್ಕ್ಸ್‌ನ್ಯಾಗ ಹೋತೋ....ಆದ್ರೂ Logic Exemption ಅದ. ಈ ಸರ್ತೆ Ex ಆಗಿದ್ರೂ ನಡಿತಿತ್ತು, ಮುದ್ದಾಂ ಈ Election ಕಾಲಾಗ Regular ಆಗೀನಿ ಈ ಸರ್ತೆ ನಾವೊಂದ Electಆಗಿಬಲೆ Gymkhana fund ಲೂಟ ಲೂಟಮಾಡೂಣಂತ ಯಾಕೊ ಕುಲಕರ್ಣಿ?

ಕುಲಕರ್ಣಿ--ಮತ್ತಿನ್ನೇನು cafe ದ ಅಮ್ಲೆಟು, Deccan Talkiesಉ Lords Hair Cutting Saloonಉ!

ದೇಶಪಾಂಡೆ—ನಮ್ಮಿಬ್ಬರಗೂ ಒಂದೊಂದ ರೇನಕೋಟ ಆಗಬೇಕ್ಪಾ ಮತ್ತ. ಯಾರಿಗ್ಗೊತ್ತು; ಆರಿಸಿಬಂದಿಂದ ನಮನ್ನೇನು ಮಾತಾಡ್ಸ್ತಾಯೋ ಇಲ್ಲೋ. ನೀವೇನ ಕಸರತ್ತ ಮಾಡಿದ್ರೆಪಾ ಮಕ್ಳ ಅಂದೆಂದ್ರ ಆತಲ್ಲಾ ನಮ್ಮವಸ್ಥಿ.

ಕುಲಕರ್ಣಿ—Feast ಗೀಸ್ಟ ಇದ್ದಾಗ ನಾವೊಂದು, ನಾಕೈದು Guests ಕರಕೊಂಡು ಬರಾವ ನೋಡು.

ದೇಶಪಾಂಡೆ--ಮತ್ತ ನೀ ರೊಕ್ಕಾ ಪಕ್ಕಾ ಉಳಿಸಿಗೊಂಡ್ರೂ ನಮ್ಮೂರ ಮುಂದ್ಗ ಗೊತ್ತಿರ್ಲಿ. ಎರಡ್ನೇದಾವ್ರು Watch....... ಇಟ್ಟಾರು!

ಬಸಂತ-ಈಗ್ಯಾಕದಲ್ಲಾ ಮಾತು. ಏನ ಮಾಡ್ತಿನ್ಯೊ ಏನಬಿಡ್ತಿನ್ಯೊ ನೋಡಿರಂತ.... ಮೊದ್ಲ ಸಧ್ಯಾ ಏನ Order ಕೊಡ್ತಿಕೊಡ್ಡಾ ದೇಶ ಪಾಂಡೆ

ದೇಶಪಾಂಡೆ- ನನಗ ಹಸಿವಿಲ್ಲೊ, ನೀವ ಏನಾರ ತೊಗೊಳ್ರಿ.

ಕುಲಕರ್ಣಿ—ಯಾಕ ಮನ್ಯಾಗೇನು, ಹಸ್ತ ಮಡೀಲೇ ನೇವಿದ್ಯಾ ಇಡಬೇಕಾಗೇದೇನು?

ಬಸಂತ--ನೀ Order ಮಾಡಿದ್ರು, ರೊಕ್ಕಾ ನಾ ಕೊಡ್ತೇನಿ. ಹೇಳ್ಬಾ ಘಾಬರ್‍ಯಾಗಬಾಡಾ. (ಕುಲಕರ್ಣಿಗೆ) ರೊಕ್ಕಂದ್ರ ಬಡಕೊಂಡ ಸಾಯುತಾನ ನೋಡ್ಡಾ ಕುಲಕರ್ಣಿ. (ದೇಶಪಾಂಡೆಗೆ) ಕಾಲೇಜ್ನಾಗ ಯಾಕ ಬಂದೆಪಾ ಈಪರಿಂದ. ಎಲ್ಲ್ಯಾರ Section-Writer ಆಗ್ಬೇಕಾ ಗಿತ್ತು! (ಕುಲಕರ್ಣಿಗೆ) ನೋಡೊ ಈ ಮಗಾ Matric ಪಾಸಾಗಿ ಆರತಿಂಗ್ಳಾದ್ರೂ ಒಂದಾರ Tiffin ಉ?

ಕುಲಕರ್ಣಿ—ಹೊಗ್ಲಿ ಬಿಡೊ! ನಿನ್ನ ಕಿಮ್ಮತ್ತು ಅವಗೇನ ಬಂದೀತ್ತು ಅಲ್ಪಾ ಬಸಂತಾ, ನೀ Elect ಆದೆಂದ್ರ ಏನೇನ Functions ಆಗತ ಕ್ಕದ್ದು ಯುಲ್ಲಾ ಕರಾರ ಮಾಡ್ಕೊ ಅಂತಾನಲ್ಲೊ ದೇಶಪಾಂಡೆ.

ಬಸಂತ—ಕರಾರ? ಯಾಕ್ಪಾ ಮಗನ, ಕರಾರ ಮಾಡ್ಲಿಕ್ಕೆ ನಾಯೇನು ಟಾಂಗಾ ಹೊಡಿಯಾವ್ನ? ಅಂಥಾವ್ರ ಜೋಡಿ ಸುದ್ಧಾ ನಾ ಇನ್ನೂ ಒಮ್ಮ್ಯಾ ಕರಾರ ಮಾಡಿಲ್ಲಾ. ಕನಡ ಸಾಲಿ ಮಾಸ್ತರ್‍ಧಂಗ ನೀ ಇನ್ನೂ ಆ ಪಾಯಾ ಬಿಟ್ಬೇ ಇಲ್ಲೇನು? ಇಂಥಾವ್ಕೆಲ್ಲಾ ಕರಾರ ಮಾಡೀದ್ರ ನಮ್ಮ Dignity ಏನ Keep-up ಆಧಂಗಾತೊ! (ಹುಸೇನಿಗೆ) ಹುಸೇನಿ, (ಹುಸೇನಿಯು Cleaning ದಲ್ಲಿ ಮಗ್ನ)ಯೋ ಹುಸೇನಿ!

ಹುಸೇನಿ–(ಒಮ್ಮೆಲೆ ಕೆಲಸಬಿಟ್ಟು ಬಂದು) ರಾವಸಾಬ!

ಬಸಂತ—ಒಂದಮೂರು ಅಮ್ಲೆಟ ತೊಗೊಂಡಬಾ. ಹಂಗ ಒಂದ ಮೂರು Special ಚಹಾ ಅಗ್ಲಿ.

ಹುಸೇನಿ — ರಾವಸಾಬ ಮತ್ತೇನ ಕೊಡ್ಲ್ರಿ? ತಾಜಾ ಕೇಕ ಜಾಮುನ್ ಮೈಸೂರಪಾಕ, ಪುಗಿ, ಬಾಸುಂದಿ.

ದೇಶಪಾಂಡೆ—ಏನಾರ ಸೋವಿದ್ರಾಗ ಹೇಳ್ರಿ ಖಾರದ್ದು

ಹುಸೇನಿ—ರಾವಸಾಬ, ನಿಮ್ಮಂತಾವ್ರು ಹಿಂಗಂದ್ರ ಹೆಂಗ್ರಿ!

ಬಸಂತ—ಹೂಂ, ಅವನ್ನಾತ್ಗೊಂಡೇನ ಮಾಡ್ತಿಯೊ ತಂದಿಡು ಏನೇನ ತಾಜಾ ಅವ ಅವನ್ನ. Welcome Hotel ಅಂತ ತಿಳದಾನಿ ದನ್ನ.

ಹುಸೇನಿ— ಸ್ವಗತ) ಅನಬೇಕು ನಮ್ಮ ಬಸಂತರಾಯ್ರು ಸರ್ದಾರ ಮನ್ ಶಾರು ಕೇಳದಾಗ ಖುಶಿ ಕೊಡ್ತಾರ............(ಹೋಗುವನು)

ದೇಶಪಾಂಡೆ—ಇವತ್ತ ನಮ್ಮ ಕ್ಲಾಸನಾಗ ಭಾರಿ ಧಾಂದ್ಲೆ ಹಾಕಿ ಬಿಟ್ರಪಾ ಹುಡ್ರು First Period ಗೆ

ಕುಲಕರ್ಣಿ—ಯಾಕ ಯಾರ್ದಿತ್ತೊ First Period ಉ?

ಬಸಂತ-F. Y ದ ಹುಡ್ರುಗೆ ಯಾರ Period ಏನೊ! ನಾವಂತೂ ಅಳಿಸಿಕೊಡ್ತಿದ್ವಿ ಯಂಥಾ Science period ನ್ಯಾಗ ಧಾಂದ್ಲೆ ಹಾಕ್ದ ಬಿಟ್ಟಾವಲ್ಲನಾ ಅತ್ಲಾಗ Lectrue ನಡದಾಗ ಇತ್ಲಾಗ ಒಮ್ಮೊಮ್ಮೆ ಸ್ವಸ್ಥ ಮಲಗಿ ಬಿಡ್ತಿದ್ವೆ ಇಲ್ಲೋಡು Terminal ದಾಗ Science Paper ನ್ಯಾಗ 'ಕುಣಿಯೋಣು ಬಾರ' ಹಾಡ ಬರದ ಬಂದಿದ್ದೆ.

ದೇಶಪಾಂಡೆ—ಅಲ್ರ್ಯೊ, ನೀವ ಧಾಂಲ್ದೆ ಹಾಕಿದ್ರ, ನೀವ Mischiet ಮಾಡಿದ್ರ ನಿಮ್ಮ Study ಹಾಳಾಕ್ತದೊ ಏನ Professor's ರ Study ಹಾಳಾಕ್ತದೊ?

ಕುಲಕರ್ಣಿ—ಅಲಾಲಾಲಾ! ಇವಾ ಯೇನ ಕಡಿಮಿ ಧಾಂದ್ಲೆ ಹಾಕಾವ್ಪಾ! ಯೇ, ಮತ್ತೊನ್ನ ಕಳ್ಳ ನೋಡ ನೀನು! ಮೊನ್ನೆ ಅಲ್ಲೆ ಆ Desk ಇನ ಮ್ಯಾಲೆ ಏನೋ ಬರದಿದ್ದೆಲ್ಲಾ ಅದೇನು ಕಡಿಮಿ ಧಾಂದ್ಲೆ ಏನು?...........ರಾಯ್ರು ನಿನ್ನೆ ತಮ್ಮ Role ಹೇಳೂದ್ರಾಗ ನಾ ಸಿಗ ತಿದ್ದೆ ಗೊತ್ತದನ? ಮತ್ತ Mischief ಮಾಡದಿದ್ರ ಬೀಳತಿತ್ತೇನು ತಮ್ಮ Role ಉ?

ಬಸಂತ—ಅವಗೇನ್ ತಿಳೀಬೇಕ ಬಿಡೋ, ಇಂಥಾವೆಲ್ಲಾ Politics ಉ.

ದೇಶಪಾಂಡೆ—ಖರೇ ಅದ. ನೀವ ದೊಡ್ಡ Politicians ಉ! ಇರ್ಲಿಪಾ........ ಅಲ್ಲೋ ಬಸಂತಾ Lady Students ಗ್ಯೂ Canvass ಮಾಡೂಣಲ್ಲಾ?

ಬಸಂತ— Oh! I have already. ಮತ್ತ ಈ ಸರ್ತೆ ನಮ್ಮ Emily Vote ನನಗ ಅಂತ ತಿಳಿ. ನಾ Elect ಆದ್ನೆಂದ, Garlanding ಮಾಡಬೇಕಾದಾಗ ನಮ್ಮ Emily ನ್ನ Forward ಮಾಡ್ತೀನಿ.

ಕುಲಕರ್ಣಿ—ವಾ! ಛಾಪ ಒಗದೀಯೇನ್ಹಂಗಾರ! Congratulations!

(ಹುಸೇನಿಯು ಅಮ್ಲೆಟು ಚಹಾ ತಂದಿಡುವನು.)

ಬಸಂತ—(ಹುಸೇನಿಗೆ)ಒಂದ Gold Flake Pack ಉ, ಒಂದ ಮೂರ ನಾಕು ಪಾನಪಟ್ಟಿ· ಎಷ್ಟಾಗ್ತದ ಹಚ್ಚು. ಮುಂದಿನ ತಿಂಗ್ಳ ನೋಡೂಣಂತ. ಹಿಂದಿಂದೇನು ಇಪ್ಪತ್ತ್ಯೋಳಿರಬೇಕಲ್ಲ?

ಹುಸೇನಿ—ಅಲ್ರಿ ಇಪ್ಪತ್ತೈದು. ರಾವಸಾಬ, ಹೆಚ್ಗಿ ಯಾಕ ಹೇಳೂಣ ಹೇಳ್ರಿ (ಸ್ವಗತ) ಏನ ಮಂದೆಪಾ ಇದು! ಇಪ್ಪತಮೂರದ, ಹಂತಾದು ಇಪ್ಪತ್ತ್ಯೋಳೇನು ಅಂತಾರ!

ಬಸಂತ—ನೋಡೋ ಕುಲಕರ್ಣಿ, Faithful ಅನಬೇಕು ನಮ್ಮ ಹುಸೇನೀನ (ಹುಸೇನಿಗೆ) ಆತಿದಷ್ಟ ಹಚ್ಚು. ( ಕಿಸೆ ಬಾರಿಸಿಕೊಳ್ಳುತ್ತ, ಕುಲಕರ್ಣಿಗೆ) ಇವತ್ತ ನಮ್ಮ ಕಾಲೇಜ ಸಿಪಾಯ್ಗೆ ಒಂದಾತಣೆ ಕೊಡಬೇಕಪ್ಪಾ. ಒಂದ ತಿಂಗ್ಳಾತು ಆ ಮಗಾ ಸಲಾಮ ಹೊಡಿಯೂದ ಬಿಟ್ಟಾನೀಗ.

[ ಹುಸೇನಿಯು ಸಿಗರೇಟು ಪಾನಪಟ್ಟಿ ತಂದಿಡುವನು ಎಲ್ಲರೂ ಹಾಕಿಕೊಂಡು]

ದೇಶಪಾಂಡೆ—[ ಕುಲಕರ್ಣಿಗೆ] ನಿನ್ನ ಕಡೆ One Act plays ಇದ್ರ ಕೊಡಪಾ ಒಂದ ನಾಕ ದಿವಸ ಓದಿ ಕೊಡತಿನಿ.

ಕುಲಕರ್ಣಿ—ಯೇಳೊ ನಿನ, ಅದನ್ನ ಕೊಳ್ತಾರೇನು? ಹದ್ನೈದ ಮಾರ್ಕ್ಸಿನ ಬುಕ್ಕದು.

ದೇಶಪಾಂಡೆ---ಅಲ್ಲೊ ಮತ್ತ ಮೊನ್ನೆ ನಿಮ್ಮ Father ಕಡಿಂದ ಎರಡ ರೂಪಾಯಿ ಇಸಗೊಂಡಿ One Act plays ಗಂತ ಅದಕ್ಕ ಕೇಳ್ದಿ.

ಕುಲಕರ್ಣಿ---ನೀ ಯುಲ್ಯೊ 18th Century ಆವಾ ಕಾಣಸ್ತಿ. ಬುಕ್ಕಿಗಂತ ರೊಕ್ಕಾ ಇಸಗೊಂಡಾಕ್ಷಣಕ್ಕ ತೊಗೊಂಡ ಬಿಡೂದೇನು? ಮೊನ್ನೆ ಮತ್ತ Talky ಗೆ ಹೋಗಿ ಬರಲಿಲ್ಲೇನು ?

ಬಸಂತ--ಬರೇ ಉದ್ಧ ಓದೀದ್ರ 2nd Class ಬರ್ತಾರೇನೋ ? ಅಂ, ದೇಶಪಾಂಡೆ? ಬೇಕದಕ್ಕೂ ಛಾಪು ! Election ದಾಗ Candidates ಆಗಬೇಕು, Gatheringನ್ಯಾಗ ಓಡ್ಯಾಡಬೇಕು Debateನ್ಯಾಗ ಮಾತಾಡಬೇಕು, ನಾಟಕದಾಗ ಪಾರ್ಟ ಮಾಡ ಬೇಕು ತಿಳಿತ. ಆಮ್ಯಾಲೇನೋ 2nd Class ಬಿಟ್ಟು 1st Class First ಬರಬಹುದು.

ದೇಶಪಾಂಡೆ--ಹೊತ್ತಾತೊ [ಎಲ್ಲರೂ ಎದ್ದು ಮುಂದೆ ಬರುವರು.]

ಬಸಂತ--ನೊಡ್ರೆಪಾ ಹಂಗರ ಇವತ್ನಿಂದ ರಾತ್ರಿ ಅಷ್ಟು ಓಡ್ಯಾಡುಣು.

ದೇಶಪಾಂಡೆ -ನಮಗ ನಿದ್ದಿ ಕಟ್ಟೊದಾಗೂದುಲ್ಲೊ ಮೊದ್ಲ ಅಜೀರ್ಣ ಪ್ರಕರ್ತಿ ಬ್ಯಾರೆ.

ಬಸಂತ--ಚಹಾ ಕುಡಸ್ತಿನಿ ಬಾರಪ್ಪಾ ಥೊಂಗ ತಗೀಬ್ಯಾಡಾ.

ಕುಲ್ಕರ್ಣಿ---ಒಂದ ಯೋಳೆಂಟ ದಿವಸ ಓಡ್ಯಾಡುಣ್ಪಾ ಮತ ನಮ್ಮ ಬಸಂತನ ಕಾಲಾಗ.

ದೇಶಪಾಂಡೆ--ನಿಮಗೊಂದು ನಾ ಬ್ರಾಂಬ್ರ Votes ಅಷ್ಟು ಕೊಡ್ಸ ಸೀದ್ರಾತ್ಪಾ

ಬಸಂತ--ಹಂಗ ನಂಬ್ಲಿಕ್ಕೆ ಬರೂದುಲ್ರ್ಯೋ ಆಯ್ತಾ ವ್ಯಾಳ್ಯಾ ದಾಗ Votes ಎರಡ್ನೇ ಕಡೆ ಒಡಿತಾವ. ಮತ್ತೆ ನಾ ನಮ್ಮ ಜಾತಿ Votes ಬಿಟ್ಟು ನಿಮ್ಮ ಜಾತಿ ಅವ್ರ ಮ್ಯಾಲೆ ಹೆಚ್ಚ ವಿಶ್ವಾಸ ಇಟ್ಟನಿ.

ಕುಲಕರ್ಣಿ---ಜಗತ್ನ್ಯಾಗ ಜಾತಿಯಲ್ಲಾ ಒಂದ ಮಾಡಬೇಕು ಅಂತ ಜನ್ರು ನಡಸ್ಯಾರ; ಅಂಥಾದು ನಮ್ಮಲ್ಲೆ ಜಾತಿ, ಜಾತ್ಗೆ ಪಕ್ಷ ಪಾತಾ!

ಬಸಂತ--ನಾವೇನು ನಮ್ಮ ಧರ್ಮದ ಸಲುವಾಗಿ ಬಡದಾಡ್ತೇವೇನ ಬಿಡೊ ಮತ್ತ ಜಾತಿ ಭೇದಾ ಮಾಡಬಾರ್ದಂತ ನಿಮ್ಮ ಜಾತಿ ಅವ್ರ Votes ಗೆ ಕೈ ಹಾಕಿಲ್ಲೇನ್ರಾ? ನೊಡ್ರೆಪಾ ನನ್ನ ಲುಕ್ಸಾನ ಮಾಡ ಬ್ಯಾಡ್ರಿ.

ಕುಲಕರ್ಣಿ--ಅದರ ಕಾಳಜಿ ಬಿಡೊ. ನೀ ನಿಂತರಲಿಕ್ಕೇ ಎರಡ್ನೇ ದಾವ್ರ ಖ್ಯಾತಿಯೇನು ಬರೂದು...............ಅಲ್ಲೊ ಬಸಂತಾ ಇವತ್ತ Talky ಭಾಳ Fine ಇದ್ದಾಂಗ ಕಾಣಸ್ತದೊ

ಬಸಂತ - ಹಂಗರ ಇವತ್ತ Camp ಹಾಕೂಣಲ್ಲಾ

ಕುಲಕರ್ಣಿ--ನನ್ನ ಕಡೆ ಚಿಲ್ಲರಿಲ್ಲೊ. ನಿನ್ನ ಕಡೆ ಇದ್ರ ಕೊಡು ಹಿಂದಾಗಡೆ ಕೊಡ್ತೀನಿ.

ಬಸಂತ—ಇಂಥಾ Tinpot ಗೆಲ್ಲಾ ಕಡಾ ಕೇಳ್ತಾರೇನೋ ಅದರ ಕಾಳ್ಜಿ ಯಾಕ ಬಾ ನೀ Box seat ತಗಸೂಣಂತ [ಯಾರನ್ನೊ ನೋಡಿ ಒಮ್ಮೆಲೆ] ಒಳ್ಳೆದು ನೊಡ್ರೆಪಾ ಹಂಗರ........ನಾಳೆ ಕಾಲೇಜ ದಾಗ ಭೆಟ್ಟಿ [ಲಗಬಗೆಯಿಂದ ಹೋಗುವನು]

ದೇಶಪಾಂಡೆ—ನೋಡದೇನೊ ಹೆಂಗ Shooting star ಹೋದಂಗ ಹೋದಾ, ನಮ್ಮ College star ನೋಡಿ? ಅಕೇನೀ ಮಗ್ಗ Solid Vote ಹಾಕೂದೂ ಅಷ್ಟ್ಯಾಗ ಅದ

[ಶಾಮನು ಪ್ರವೇಶಿಸುವನು]

ಕುಲಕರ್ಣಿ--[ ಶಾಮನಿಗೆ ] Good Morning Mr. Sham Rao ಮತ್ತೇನು ಯತ್ಲಾಗ ಹೊಂಟಿತ್ತು ಸ್ವಾರಿ?

ಶಾಮ -ನೋಡ್ರಿ ನಮ್ಮ Article ಅಂದ್ರ ಕಿಮ್ಮತ್ತಿಲ್ಲಾ ಈ Editors ಗೆ! At least Junior B A ದಾವಾ ಅಂತಾರ ಹಾಕ

ಬಾರ್ದ ನಮ್ಮ Article ಉ! ಹೋತ್ತಿಂಗ್ಸ ಕೊಟ್ಟಿದ್ದಿ ಎಷ್ಟ ಧೈನಾಸ ಬಟ್ಟೆ ಹೇಳ ಕೊಂಡಿದ್ದೆ, ಹೂ ಛಾಪಸೂಣಂತ ಅಂದಿದ್ರು ಅಂಥಾದ ಈಗ Deceive ಮಾಡೀದ್ರೂ-Aristocratic fellows!

ಕುಲಕರ್ಣಿ—ಅದಕ್ಯಾಕ ಕಾಳಜಿ ಮಾಡ್ತಿರಿ ನಾ ಹಾಕಿಸಿ ಕೊಡ್ತಿನಿ ನಮ್ಮ ದೇಶಪಾಂಡೆನ Father ಅಲ್ಲೇ Work ಮಾಡ್ತಾರ.

ದೇಶಪಾಂಡೆ—Oh yes! ಅಲ್ಬತ್ ಕೊಡ್ರಿ. ಯೋಗ್ಯಿದ್ರ ಅವರ ಹಾಕ್ತಾರ.

ಶಾಮು—[ಸ್ವಗತ] ಮತ್ತ ಯೋಗ್ಯಿದ್ರ ಅಂತಾರಲ್ಲಾ ಯೋಗ್ಯರಲಿಕ್ಕಿಲ್ಲ ಮತ್ತ ನಮ್ದು! [ಪ್ರಕಾಶ] ಆಸಂಕೇತರೂಪಾ ಅಷ್ಟ ಬಿಟ್ಟು ಹ್ಯಾಂಗಾರ ಮಾಡಿ ಅಷ್ಟ ಹಾಕಿ ಕೊಡ್ರೆಪಾ ನೀವು ಹೇಳಿದ್ದ ಕೇಳ್ತನಿ

ಕುಲಕರ್ಣಿ—ಹಂಗರ ನೀವು Cricket ಗೆ ಯಾರಿಗಾರ promise ಮಾಡಿರೇನು?

ಶಾಮು—ಯಾಕ? ನಿಮ್ಮ ಪೈಕಿ ಯಾರಾರ ಇದ್ದಾರೇನು?

ಕುಲಕರ್ಣಿ—ಹೂನ್ರಿ ನಮ್ಮ Mr Basant ಅವ್ರ ನಿಂತಾರ.... ಮತ್ತ ದಯಮಾಡಿ Kindly ತಮ್ಮ Vote ಅಷ್ಟು ಹಾಕಬೇಕು.

ಶಾಮು—ಛೇಛೆಛೆ.ಇದಕ್ಯಾಕಿಷ್ಟೊಂದ Adverbs ಹಚ್ಚತೀರಿ ಬಸಂತಾವ್ರ ನನಗೇನು ಅರೇದಾವ್ರಲ್ಲಾ. ಮೊನ್ನೆ ಅಲ್ಲಿ ಜೋಶಿ ಅವ್ರ Room ನ್ಯಾಗ ಕೂತಿದ್ರು, ಗೊತ್ತದರಿ........Mr Basant ಅವ್ರ ಭಾಳ Kind ಇದ್ದಾರ ನೋಡ್ರಿ........[ದೇಶಪಾಂಡೆಸಿಗೆ] ಮತ್ತ ನಮ್ಮ Article ಒಂದು ಮರಿಬ್ಯಾಡ್ರೆಪಾ.

ದೇಶಪಾಂಡೆ- ಛೆ, ಇವತ್ತ ಸಂಜಿಮುಂದ Manuscript ಕೊಡ್ರಿ ನಾಳೆ ಮುಂಝನೆ Proof ತೊಗೊಂಡ ಬಿಡ್ರಿ.

ಶಾಮು-Alright thank you in anticipation.... Mr. Deshpande, be cock sure—I will Vote for Mr. Basant. (ಹೋಗುವನು

ದೇಶಪಾಂಡೆ- ಇವಾ ಯಂಥಾ ಕವೀಪಾ........ ಕವಿನೋ ಏನ ಕಪಿನೊ!

ಕುಲಕರ್ಣಿ- ನನ್ನದ್ದೇನ ಹೋದದ್ದೊ. ಹೂಂ ಅಂದ್ರಾತ್ಪಾ ನಮ್ಮ ಕೆಲಸಾಗಲಿಕ್ಕೆ........ ಮತ್ತ ನೀ ಕಡಿತನಕಾ ಬಸಂತನ Side ಅ, ಹಿಡಿಯಾವ ಹೌದಲ್ಲೊ ?

ದೇಶಪಾಂಡೆ- ಅದನ್ನೆಂಗ ಹೇಳ್ಳಿ............ ಅಲ್ಪಾ ನಾವ್ಯಾಕಿಷ್ಟ ಶ್ರಮಾ ತೊಗೊಂಡು Canvass ಮಾಡಬೇಕ ಬಿಡೊ; ಯಲ್ಲಾ ಗೊತ್ತದ, ಬಸಂತನ Tendency. ಆಗೂತಂಕಾ ಅಷ್ಟು ಡುಬ್ಬಾ ಛಪ್ಪರಸ್ತಾನ. ಒಂದವ್ಯಾಳ್ಯಾ ಇವ್ನ ಆರಿಸಿ ಬಂದ್ರ ಗ್ವಾಡಿಮ್ಯಾಲೆ ಬಟ್ಟಿಟ್ಟ ಹೇಳ್ತಿನಪಾ—ಈ ಮಗಾ ನಮ್ಮನ್ನ ಕಣ್ಣೆತ್ತಿ ಮಾತಾಡ್ಸು ದುಲ್ಲಾ.

ಕುಲಕರ್ಣಿ- ಯಲ್ಲಾರ Tendency ನೂ ಹಂಗ ಬಿಡೊ! ಆವ್ರ ಒಳಗಿನMotives ಅ, ಬ್ಯಾರೆ ಇರ್ತಾವ. ಈಗ ನಮ್ದು Case ತೊಗೊಳ್ಳಾ. ನಾವು ನಾಟಗದಾಗ ಪಾರ್ಟಯಾಕ ತೊಗೊಂಡಿವಿ?

ದೇಶಪಾಂಡೆ— ಸಾಹಿತ್ಯ ಸೇವಾಕ್ಕ! ರಂಗಭೂಮಿ ಸೇವಾಕ್ಕ!

ಕುಲಕರ್ಣಿ— ಸಾಹಿತ್ಯ ಸೇವಾ ನೀಯೇನ ಮಾಡ್ತಿ ನಿಂತಲಿ. ನಾಟ್ಕಾ ಬರದಾವಾ ಮಾಡ್ತಿದ್ದಾನು. ರಂಗಭೂಮಿ ಸೇವಾ ಅಂತೂ ಈ Amateure ನಾಟಗದಾವ್ರದು ಕಂಡದ್ದ ಅದ! ಎಲ್ಲಿ ವರ್ಷ ಕ್ಕೊಮ್ಮೆ ನಾಟ್ಕಾ ಮಾಡ್ತಾರೊ ರಂಗಭೂಮಿ ಸೇವಾ ಅಂತ!

ದೇಶಪಾಂಡೆ- ಹಂಗರ ನಾವು ನಾಟಗದಾಗ ಪಾರ್ಟ ತೊಗೊಂಬು ಉದ್ದೇಶಾರ ಏನ್ಪಾ? ನಿದ್ದಿಗೆಟ್ಟು ನಾಟ್ಕಾ ಮಾಡಬೇಕು. ಟಿಕೀಟ ಖರ್ಚ ಮಾಡಬೇಕು. ಮ್ಯಾಲೆ ವಸೂಲಾಗದಿದ್ರ ಕೈಲೆ ಸೋಸಬೇಕು.

ಕುಲಕರ್ಣಿ–ಸೋಸಬೇಕ್ವಾ ಮತ್ತ ಯಾರಿಚ್ಚಿ! ನಾಟಗದಾಗ ಪಾರ್ಟ ತೊಗೊಂಡ್ರ ನೋಡಾವ್ರ ಮ್ಯಾಲೆ ಛಾಪ ಒಗೀಲಿಕ್ಕೆ ಬರ್ತದ!........ ಅದಿರ್ಲಿ, ಇವತ್ತ ರಾತ್ರಿ Cinema Programme ಹ್ಯಂಗ Arrange ಮಾಡ್ದಿ? ಲಗೂಬಾ ಮತ್ತ.

(ಹೋಗುವರು.

## ಪ್ರವೇಶ ೩

[ಶಾಮನ ಮನೆ. ಶಾಮನು ಓದುತ್ತ S. S. ಮತ್ತು ಪಾಟೀಲ ಬರವರು.]

ಶಾಮ—ಬರ್ರಿ ಬರ್ರಿ

[S. S, ಮತ್ತು ಪಾಟೀಲ ಕೂಡ್ರುವರು]

S. S. ನೋಡ್ರೆಪಾ ಮರಿಬ್ಯಾಡ್ರಿ ಮುಂದ ನಮ್ಮಿಂದೇನಾರ ಫಾಯಿದೆ ಆಗಬಹುದು. ಅವಾ Desai ಇದ್ದಾನಲ್ರಿ ಮೊನ್ನೆ ನನ್ನ Application ಗೆ Second ಮಾಡಿದ್ದಾ, ಅಂಥಾದು ನಿನ್ನಿನ ದಿವಸ ಮುದ್ದಾಂ ನನ್ನ ಕೆಡಸ್ಲಿಕ್ಕೆ ತಾನ Candidate ಆಗ್ಯಾನ

ಶಾಮ—ಬಿಡ್ರಿ ಅಂಥಾವ್ರೆಲ್ಲಾ ಬಂದ್ರ ಮತ್ತ Election ಅನಬೇಕ್ಯಾಕದಕ್ಕ.

ಪಾಟೀಲ—ತಮ್ಮ Poem Kanarese Editor ನ್ನ ಕೈಯಾಗ ಕೊಟ್ಟೇನಿ By all means ಹಾಕ್ತೇನಿ ಅಂದಾನ

S S—ಆವಾ ವೊಂದ ನಿಮ್ಮ ಕವಿತಾ ಹಾಕದಿದ್ರ ಅವನ್ನ Editorship ಕಿತ್ತಿ ಒಗಸೂಣಂತ ಮತ್ತ ಬಸಂತ್ಗ promise ಮಾಡಿಲ್ಲ ಹೌದಲ್ರೊ?

ಶ್ಯಾಮ—ಛೇ ಅವಗ್ಯಾರ ಹಾಕಬೇಕ್ರಿ Aristocratic fellow

ಪಾಟೀಲ- ತಮ್ಮ "ನಲ್ಲೆಯ ಸಿಟ್ಟು" ಭಾಳ Fine ಆಗೇದ ನೋಡ್ರಿ [ಸ್ವಗತ] ಯಾ ಮಗಾ ಓದ್ಯಾನದನ್ನ

ಶಾಮ--ಏನೋ ಇನ್ನೂ Budding poets ಇದ್ದೀವ್ರೆಪಾ

ಪಾಟೀಲ--ನೋಡ್ಡಾ ಹಂಗರ ನಮ್ಮ ಪೈಕಿ ಆವ್ನ ನೀನು

S. S. [ ಪಾಟೀಲನ ಕಿವಿಯಲ್ಲಿ ] ಬಹುವಚನದಿಂದ ಕರಿಯೊ! ರಮಸೂ ರೀತಿ ಸುದ್ಧಾ ಗೊತ್ತಿಲ್ಲಲ್ಲಾ.

ಪಾಟೀಲ--ಛೇ ನಾನೂ ಶಾಮಾ ಸಾಲೀ ಗೆಳೆಯಾರೊ ಯಾಕೊ ಶಾಮಾ Fifth ದಾಗ ನಾನ ನಿನಗ Sanskrit Copy ಕೊಟ್ಟಿದ್ದಿಲ್ಲಾ

ಶಾಮು -- ಹೌದ್ರಿ ನಿಮ್ದು ಪುಣ್ಯಾ ನಾ-ಪಾ-ಸಾ-ದ-ದ್ದು

S S--ಮರೀಬ್ಯಾಡ್ರೆಪಾ ಇದ ಕಡೀ ಸರ್ತೆ ಹೇಳೂದು

ಶಾಮು--ಹೆಚ್ಚಿಗಿ ಇನ್ನೇನ ಹೇಳ್ರೆಪಾ ಬೇಕಾರ ನನ್ನ Voting Sheet ನಿಮ್ಮ ಕೈಯಾಗ ಕೊಟ್ಟ ಬಿಡ್ತೇನಿ ನೀವ ಹಾಕ್ಕೊಳ್ರಿ

S S--ಛೆ ಹಂಗ Rule ಇಲ್ರಿ ಆದ್ರೂ ಇಷ್ಟ ಖಾತ್ರಿಯಿಂದ ಹೇಳ್ತಿದಿ ಅಂದ ಮ್ಯಾಲೆ I thank you

ಶಾಮು--ಮತ್ತ ನನ್ನ ಬಿನ್ನಹಾ ಒಂದು ಮರೀಬ್ಯಾಡ್ರೆಪಾ

ಪಾಟೀಲ--ಯಷ್ಟ ಹೇಳಬೇಕ್ಪಾ ಯಿನ್ನ Miscellany ನೋಡಿಂದನ ನಮ್ಮನ್ನ ಮಾತಾಡ್ಸು ಮತ್ತಿನ್ನೇನು!

S S--ನಡೀಪಾ ಪಾಟೀಲಾ [ಶ್ಯಾಮುನಿಗೆ] Good night

[S S ಮತ್ತು ಪಾಟೀಲ, ಹೊರಡುವಷ್ಟರಲ್ಲಿ ಬಸಂತ, ಕುಲಕರ್ಣಿ, ದೇಶಪಾಂಡೆ ಪ್ರವೇಶಿಸುವರು. ಬಸಂತನು S S ಪಾಟೀಲ ಇವರು ಬಂದದ್ದನ್ನು ತನ್ನ ಗೆಳೆಯರಿಗೆ ಸನ್ನೆಯಿಂದ ತಿಳಿಸುವನು]

ಶಾಮು-[ಸ್ವಗತ] ಇದೇನ ಬಂತಪಾ ನನ್ನ ಸುತ್ತ! ಅಡಕೋತ್ತಾಗಿನ ಅಡಿಕ್ಯಾದ್ಹೆಲ್ಲಾ. [ಪ್ರಕಾಶ] ಒಳ್ಳೇದ್ರಿ Mr S. S. [ Don't care ಎಂದು S. S. ನ ಕಿವಿಯಲ್ಲಿ ಹೇಳುವನು. S. S. ಮತ್ತು ಪಾಟೀಲ ಹೋಗುವರು. ಹೋಗುವ ಮುಂದೆ ಇಬ್ಬರೂ ಬಸಂತನನ್ನೂ ಅವನ ಗೆಳೆಯರನ್ನೂ ದುರುದುರನೆ ನೋಡುವರು]

ಕುಲಕರ್ಣಿ--ಯಾಕ್ರೆಪಾ ನಿನ್ನೆ ನಿಮ್ಮ Article print ಮಾಡ್ಲಿಕ್ಕೆ ಕೊಟ್ಟ ಬಂದದ್ದರ ಉಪಗಾರೇನಿದು?

ಶಾಮು---[ಆನಂದದಿಂದ] ಅಂ? ಕೊಟ್ಟ ಬಂದ್ರೇನು ಛಾಪಸಲಿಕ್ಕೆ?

ದೇಶಪಾಂಡೆ-ನೀವು ಹಂಗರ S- Sಗ promise ಮಾಡೀದ್ರಿ ಹೌದಲ್ಲೊ?

ಶಾಮು—ಏಳ್ರಿ ನಿಮ ಇಂಥಾವ್ರಗೆಲ್ಲಾ Vote ಹಾಕಿದ್ರ ತೀರ್ತಲ್ಲಾ ಅವನ ಮಾರಿ ಮುಂದ ಹೂಂ, ಅಂದ್ರೂ ನಾ ಹಾಕೂದು ಬಸಂತ!

ಕುಲಕರ್ಣಿ--ಬರೇ ನಿಮ್ಮ Article print ಆಗ್ತದಂತ ನಮ್ಮ

ಮೂರಿ ಮುಂದ ಹೂಂ, ಅನಬ್ಯಾಡ್ರಿ ಏನಂಬೂದು Open-heartedly ಹೇಳಿ ಬಿಡ್ರಿ ನಾವೇನು ಸಿಟ್ಟಿಗೆ ಬರೂದುಲ್ಲಾ.

ಶಾಮು-ಹೆಚ್ಚಿಗಿ ಇನ್ನೇನ ಹೇಳ್ರಿಪಾ. ಬೇಕಾರ ನನ್ನ Voting sheet ನಿಮ್ಮ ಕೈಯಾಗ ಕೊಟ್ಟ ಬಿಡ್ತಿನಿ ನೀವ ಹಕ್ಕೊಳ್ರಿ ಮತ್ತಿನ್ನೇನು!

ಕುಲಕರ್ಣಿ—ಅಲ್ಲಾ ಒಬ್ರ Voting sheet ಇನ ವ್ಯಾಲೆ ಇನ್ನೊಬ್ರ ಬರಿಯೂ ಅಧಿಕಾರಿಲ್ಲಾ ಅಂತ ಅಷ್ಟ ಧೈರ್ಯಾಡ್ಲೆ ಹೇಳ ಬ್ಯಾಡ್ರಿ. ನಾವು ಅದನ್ನೂ ಮಾಡಿವಿ.

ಶಾಮು—ಇಲ್ಲೊಡ್ರಿ ಒಮ್ಮೆ promise ಮಾಡೀದ್ನೆಂದ್ರ ನಾಲಿಗಿ ಹೊಳ್ಳಸಾವಲ್ಲನಾ-ಅಗ್ನಿ ಸಾಕ್ಷಿ ಆಣಿ ಮಾಡಿದ್ದಂಗ!

ಕುಲಕರ್ಣಿ —ಹನ್ನೆರಡ ಪೈದ ಆಣೆರಿ ಇವೆಲ್ಲಾ!

ಬಸಂತ--ಅವಾ ಹಂಗ ಮಾಡವಲ್ಲ ನಡಿಯೋ ಕುಲಕರ್ಣಿ ನಾನು ಆವಾInter first year ಕೂಡೆ ಕಲ್ತಿವಿ........ ಯಾಕೊ ಶಾಮಾ? ಮತ್ತ ನೋಡ್ಡಾ ಇನ್ನ ಬರೂದಾಗುದುಲ್ಲಾ ಮರೀ ಬ್ಯಾಡ್ಯಾ.

ಶಾಮು--ಅಲ್ಲಾ ನೀವು ಸುಳ್ಳ ಇಲ್ಲಿತಂಕಾ ತೇಕ್ಕೋತ ಯಾಕ ಬಂದ್ರಿ ಅಂತಿನಿ. ಅಷ್ಟ ಭರೋಸಿಲ್ಲ? [ದೇಶಪಾಂಡೆಗೆ] ಮತ್ತ ನಮ್ಮ Artical ಒಂದ ಛಾಪಸ್ಲಿಕ್ಕೆ ಮರಿಬ್ಯಾಡ್ರಿಪಾ, ಏನೋ ಬಹಳ ಒತ್ತಾಯ ಮಾಡ್ತಿನಿ ಅಂತ ಸಿಟ್ಟಗೆಬರಬ್ಯಾಡ್ರಿ.

ದೇಶಪಾಂಡೆ-ನಾ ಹೆಚ್ಚಿಗಿ ಹೇಳುದುಲ್ಲಾ. ಆ Magazine ಬಂದಿಂದನ ನೋಡಕೊಳ್ರಿ ಛಾಪಸೇದೊ ಇಲ್ಲೊ ಅಂಬುದು.

ಬಸಂತ--ಅಲ್ಲೊ ಶಾಮಾ ನಿನ್ನ ಒಟ್ಟ Works ಅಂಬುವು ಎಷ್ಟವ ಎಲ್ಲಾ ಕೊಟ್ಟ ಬಿಡು ಒಂದFirst class preface ಹಾಕ್ಸಿ print ಮಾಡಿಸಿ ಕೊಡ್ತಿನಿ

ಶಾಮು-ಅಷ್ಟ ಮಾಡೀದ್ರ I will be ever indebted to you. ನನ್ನ Works ಉ, ಏನೂ ಒಂದ ಎರಡ, ಮೂರ Volumes ಆಗ ಬಹುದು ಇಷ್ಟ.

ಬಸಂತ-ಬೇಕಾದಷ್ಟಿಲ್ಯೋರ್ Dont care! ನೋಡ್ಡಾ.... ಹೋಗ್ತಿವಿ ಹಂಗರ Good night

ದೇಶಪಾಂಡೆ--ಸೋತ್ರಿ ನಿಮ್ಮ Article ಉ, ಒಂದ ನಾಕ ಮಂದಿ ಓವ ಬೇಕು ಅಂತ ಆಶಾ ಇದ್ರ.......[ಹೋಗುವರು]

ಶಾಮು—[ಆನಂದದಿಂದ] ಈ ಕವಿಯು ಚಿರ ಸಾಹಿತಿಯಾದನು........ ಯೀ ಕವಿಯ ಹೆಂಡತಿಯೇ........

(ಶಾಂತಾ ಪ್ರವೇಶಿಸುವಳು)

ಮೊದ್ಲ ಸಧ್ಯಾ ನಿಮ್ಮಪ್ಪ ಒಂದ ಕಾಯಿ ಒಡಿಸಿಗೊಂಡಬಾ ಅನ್ನು ಕಾಯಿ ಆಣೆ ಬೇಕಾರ ನಾಕೊಡ್ತಿನಿ.

ಶಾಂತಾ – ಯಾಕ?

ಶಾಮು—ಹಂಗ ಮರಕ್ಕೊ ಒಂದು ಒಡಿಸಿಗೊಂಡು ಬಾ ಅನ್ನು

ಶಾಂತಾ (ಆನಂದದಿಂದ) ಯಾಕ, ಲಾಟ್ರಿಗಿಟ್ರಿ ಹತ್ತೇನು?

ಶಾಮು—ಇವತ್ತಿನ ಧಿವಸ ನನ್ನ ಜೀವನದಲ್ಲಿ ಕ್ರಾಂತಿ!

ಶಾಂತಾ— ಯಾಕ? ಏನು?

ಶಾಮು—ನಾ ಮೊದ್ಲ ಹೇಳ್ಳಿಲ್ಲ! ಹೊರಗ ಹೋಗು ಮುಂದ ನಾಯಿ ಬಾಲಾ ಝಾಡಸ್ತು, ಶುಭಾ ಅದ ಅಂತ.

ಶಾಂತಾ—ಏನಾಗೇದೀಗ ಶುಭಾ ಅಲ್ಲಿಕ್ಕೆ?

ಶಾಮು – ಉದ್ಯೋಗವಲ್ಲಿ ಪ್ರಗತಿ ಅಂತ ವಾರದ ಭವಿಷ್ಯದಾಗ ಬಂದಿದ್ದಿಲ್ಲ, ಖರೆ ಬಂತ ನೋಡದು!

ಶಾಂತಾ—(ಇನ್ನಿಷ್ಟು ಸಂತೋಷದಿಂದ) ನೌಕ್ರಿ ಹತ್ತೇನ ಹಂಗರ?

ಶಾಮು-ನನ್ನ ಕವಿತಾ, ನನ್ನ Artical ಉ accept ಆದ್ವು. ನೀನು ಇನ್ನು ಮುಂದೆ ನನಗೆ ಕವಿರಾಜ, ಇಲ್ಲವೆ ರಾಜ ಕವಿಯೆಂದು ಕರೆಯತಕ್ಕದ್ದು. ನಾನು, ಅಂದರೆ ಉತ್ತಮ ಪುರುಷ, ಸರ್ವನಾಮ, ಪುಲ್ಲಿಂಗ,ಏಕವಚನ ಪ್ರಥಮಾ ವಿಭಕ್ತಿಯಾದ ನಾನು, ಈ ಕವಿಯ ಹೆಂಡತಿಯ ಗಂಡ....ನಿಮ್ಮಪ್ಪನು ಈ ಕವಿಯ ಮಾವ. ನಿಮ್ಮವ್ವನು...Sorry ನಿಮ್ಮವ್ವ ಇಲ್ಲಲ್ಲ. ನೀನು-ನನ್ನ ಹೇಣ್ತಿ. ನನ್ನ ಅಡ್ಡ ಹೆಸರು ಇನ್ನ ' ಕವಿ ಅಂತ ಮಾಡಕೋತಿನಿ....ಪ್ರಿಯೆ, ನನ್ನ ಅರಸು ಗಿಳಿಯೆ, ಸಮಾಸದಿಂದ ಅರಗಿಳಿಯೆ, ಈ ನಿನ್ನ ಕವಿಗೆ ಹೆಚ್ಚಾಗಿ ಸ್ಫೂರ್ತಿ ಬರುವಂತೆ, ಒಂದೇ ಒಂದನ್ನು...........ಕೊಡು!

ಶಾಂತಾ—ಏನದು ಕೊಡೂದು? ನಮ್ಮಪ್ಪ ರೊಕ್ಕಿಲ್ದ ಗೋಳ್ಯಾಡ ತಾನ. ಸದಾ ಕೊಡೂ ಕೊಡು.

ಶಾಮು—ತಲೀನ ಇಲ್ಲಿದಕ್ಕ! ಹೆಂಗಸೂರ್ಗೆFemale Education ಯಾಕ Necessary ಅಂದ್ರ ಇದಕ್ಕ ನಾ, ಶ್ಲೇಷದಿಂದ ಗುಪ್ತಿಟ್ಟೆ ಅಂದ್ರೂ, ಕವಿಯ ಹೆಂಡತಿಯಾದ ನಿನಗೆ ಅಷ್ಟ ತಿಳಿಬಾರ್ದ?........ನೀರ ಡಿಸಿ ಬಂದ ಈ ಭೃಂಗಕ್ಕೆ ತಾವರೆಯಾದ ನೀನು ನಿನ್ನ ಮುತ್ತಿನ ಮಧು ವನ್ನು ಕೊಡು ಚನ್ನೆ, ನೀನು ಇನ್ನಿಷ್ಟು ಚಲುವೆ ಯಾಕಾಗಲಿಲ್ಲಾ! ಇರಲಿ, ಚಲುವು ಇರದಿದ್ದರೂ ಕೂಡ ಕುರೂಪದಲ್ಲಿಯೆ, ಚಲು ವಿನ ಕೂಪ ತೆಗೆಯುವರು ಕವಿಗಳು. ಸೌಂದರ್ಯದ ಸೆಲೆಯನ್ನು ಹುಡುಕುವರು. ಕವಿತೆಯ ಕಾರಂಜಿಯನ್ನು ಪುಟಿಸುವರು. ಪ್ರತಿಭೆಯ ತುಂತುರಗಳನ್ನು........ಇಲ್ನೋಡು ನಾಳೆ ನಿಮ್ಮಪ್ಪ ಒಂದು ಛಾಪಗಾನಿ ತಗದ ಕೊಡನ್ನು! ಯಾರುಪಗಾರಕ್ಕ ಕೊಡಸ್ತಾನ ಮಗಾ. I deseive publication ನಾ ಇಂಥಾ ದೊಡ್ಡ ಕವಿ ಆದದ್ದ ಹೆಚ್ಚೊ ಅವಾ ಸೊಟ್ಟೊಂದು ಛಾಪಗಾನಿ ಕೊಡಸೂದ ಹೆಚ್ಚೆಂದೊ?

ಶಾಂತಾ—ಒಂದ ಛಾಪಗಾನೀನ ಸಾಕೇನು? ಒಂದ ವಿಮಾನ ಬೇಕಂತ ಹೇಳ್ರಿಲ್ಲಾ.

ಶಾಮು—ಈ ಕವಿಗೆ ವಿಚಾರದ ವಿಮಾನು ಇರತಿರಲಿಕ್ಕಾಗಿ ಬೇರೊಂದು ವಿಮಾನು ಬೇಡಾ. (ಸ್ವಗತ) ಕೊಟ್ರು ಅಡ್ಡಿಯಿಲ್ಲಾ. (ಪ್ರಕಾಶ) ಈ ಕವಿಯು ವಿಚಾರದ ವಿಮಾನಿನಲ್ಲಿ ತಿರುಗಾಡುವನು. ವಿಚಾರದ ತರಂಗಿಣಿಯಲ್ಲಿ ಈಜಾಡುವನು. ವಿಚಾರದ ಶಯ್ಯೆಯಲ್ಲಿ ಕನಸು ಕಾಣುವನು. ಸಂಸಾರದ ಅಘೋರ ಸಮಸ್ಯೆಗಳನ್ನು ಹುಡು ಕುವನು, ತಿಳಿಯಿತೇ ಈ ನಿನ್ನ ಕವಿರಾಜನು!

ಶಾಂತಾ—ಏನ ಕವೀನೊ! ಏನ ಕಪಿನೊ!

ಶಾಮು—ಕಪಿಯಾದರೆ ಈ ಕವಿಯು ಹನುಮಂತನಾಗುವನು. ಕವಿ ತೆಯ ಬಾಲದಿಂದ ಎಲ್ಲರ ಮನಸ್ಸನ್ನು ಮೋಹಗೊಳಿಸುವನು.

ಶಾಂತಾ—ಸಾಕು ಬರಬರ್ತ ಹುಚ್ಚ ಹಿಡಿತದೋ ಏನ ಮಣ್ಣು.

ಶಾಮು—ಹುಚ್ಚು ಹಿಡಿದರೆ ಹುಚ್ಚರ ಆಸ್ಪತ್ರಿಗೆ ಹೋಗುವೆನು.

ಅಲ್ಲಿಯು ಹುಚ್ಚರನ್ನು ಕವಿಗಳನ್ನಾಗಿ ಮಾಡುವೆನು ಕವಿಗಳು, ಹುಚ್ಚು ಹಿಡಿದರೇನೇ ಕವಿತೆ ಕಟ್ಟುವರು.

ಶಾಂತಾ—ಬರೇ ಹುಚ್ಚುಚ್ಚಾರದ ಮಾತ ಆತಲ್ಲಾ. ಸಂಜೀಗೆ ಕಾಯಿ ಪಲ್ಯಾ ಏನಾರ ತಂದೀರೊ!

ಶಾಮು—ಇಕಾ, ನಿಮ್ಮಪ್ಪನ ಗಂಟಗಿಂಟ ತಿಂದಿಲ್ಲಾ. ತಾನ ತರ್‍ತಾನ ಮಗಾ ಬೇಕಾರ ಯಾರುಪಗಾರಕ್ಕ ತರ್‍ತಾನ. ಹೆಣ್ಣ ಕೊಟ್ಟ ತಪ್ಪಿಗೀತರ ಬೇಕ ಮತ್ತ

ಶಾಂತಾ—ಸಾಕು ಗಪ್ಪಾಗ್ರಿ. ಇಲ್ಲೆ ನಡಮುನ್ಯಾಗ ಕೂತಾನ ಅಪ್ಪಾ

ಶಾಮು—(ಗಾಬರಿಯಿಂದ) ಆಂ?

—ತೆರೆ

## ಪ್ರವೇಶ ೪ [Election ಮುಗಿದನಂತರ]

(ಕುಲಕರ್ಣಿ ಮತ್ತು ದೇಶಪಾಂಡೆ ಪ್ರವೇಶಿಸುವರು.)

ಕುಲಕರ್ಣಿ—ಕಾಲೇಜದಾಗ Election ಒಂದ ಯಾಕ ಇಟ್ಟಿದ್ದಾರ್. ಕಾಲೇಜ ಸುರುವಾಗುವುದುಸತ್ತಿಲ್ಲದ General Election ಮುಂದ ಒಂದ ತಿಂಗಳದಾಗ Gathering Electionಉ. ಹಿಂಗಾಗಿ study ಹಾಳು, ರೊಕ್ಕ ಹಾಳು, Energy ಹಾಳು ಮ್ಯಾಲೆ ಒಬ್ಬರ್ಗೆ ಕೆಟ್ಟಾಗಬೇಕು ಅಲ್ದ ಮತ್ತ Terminal ದಾಗ ಐದ ಮಾರ್ಕ್ಸಿನಕಿಂತಾ ತೆಳಗ ತೊಗೊಂಡ್ರ ದಂಡಾ ಕೊಡಬೇಕು. ಛಲೋ ಯುಕ್ತಿ ಹುಡಕ್ಯಾರ. Study ಹಾಳ ಮಾಡಾವ್ರು ತಾವ, ದಂಡಾ ಕಟ್ಟಾವ್ರು ತಾವ ಏನ ಆಗ್ಲಿ Election ಗದ್ಲಂತೂ ಒಂದಪಾ ತೀರಿಧಂಗಾತಪಾ........ಈ ಬಸಂತ ಆರಿಸಿ ಬಂದ್ರ ಏನೋ ನಮಗ ಘಾಯಿದೆ.

ದೇಶಪಾಂಡೆ—ಆವಾ ಬಂದ್ರ್ರಾರ ಏನೊ ನಾಳೆ Miscellany ಒಳಗ ನಮ್ಮ ಫೋಟೊ ಬ್ಯಾರೆ ಬರೂ ಹಂಗಿಲ್ಲ.

ಕುಲಕರ್ಣಿ—ಫೋಟೋ ಬರದಿದ್ರೇನಾತೂ. Gymkhana

Fund ಆರs ಇರ್ತದಲ್ಲಾ ಮೊದ್ಲ ನೀ ಹೇಳಧಂಗ ಇಬ್ಬಗ್ರ್ಯಾ ಒಂದೊಂದು Rain Coat ಹಾಕೂಣು·

ದೇಶಪಾಂಡೆ—ಆವಾವೊಂದ ಕೊಡಪಬೇಕಲ್ಲಾ

ಕುಲಕರ್ಣಿ—ಆವಾಯೇನು ಅವ್ರ ಅಪ್ಪನ ಮನಿಯಿಂದ ಖರ್ಚ ಮಾಡಬೇಕಾಗೆದ. ನಾವೇನು ಫುಕಟೇನು ಇಷ್ಟ ಶ್ರಂಬಟ್ಟದ್ದು. ಹಂಗರ ಉಂಡಾನಲ್ಲಾ ತನ್ನ ಫಲಾ

ದೇಶಪಾಂಡೆ—ಆವಾ Elect ಆಗಿ ಬಂದ್ರೂ ಅವನ್ನ Elect ಮಾಡಿದಾವ್ರು ನಾವಾಕ್ತಿವಿ Honour ತೊಗೊಂಬಃವಾ ಆವಾ ಆಗ್ತಾನ......ಇಷ್ಟಾಗಿ. ಅವಗೆಲ್ಲೆ ಅಷ್ಟ Chances ಅವಬಿಡು. ಬರೇ Lady students Votes ಇನವ್ಯಾಲೆ ಅವನ ಭಾರಾ· Elect ಆಗದಿದ್ರೂ ಅಷ್ಟ ಹೋತು Emily ಗುತಾರ್ತು ಸಾಕಂತಾನವಾ.

ಕುಲಕರ್ಣಿ--ಆಲ್ಲಾ ದೇಶಪಾಂಡೆ ನೀ sincerely ಹೇಳು ನಿನ್ನ personal Vote ಯಾಗ್ಗೆ ಹಾಕಿದಿ?

ದೇಶಪಾಂಡೆ—ಬಸಂತ್ಗ !

ಕುಲಕರ್ಣಿ—ಪಕ್ಕಾ ಇದ್ದಿ ನೋಡ್ಪಾ ನೀ ಮಾತ್ರ. ಹೇಳು ಖರೆ ಹೇಳು·

ದೇಶಪಾಂಡೆ—ನೀ ಯಾವಾಗ ಇಷ್ಟ ಕೇಳ್ತಿ ಅಂದ ವ್ಯಾಲ ನೀ ಹೇಳು ನೀ ಯಾರಿಗೆ ಹಾಕೀದಿ. sincerely ಹೇಳಮತ್ತ.

ಕುಲಕರ್ಣಿ—ಹೇಳ್ಯಾ ನೋಡ ಮತ್ತ ಬರೂ ಚಾಣಕ್ಯ ಚಕ್ರಾ ತಂದೀ! ಯಾರ ಮುಂದೂ ಒಡಿಬ್ಯಾಡಾ.

ದೇಶಪಾಂಡೆ—ನೀ ನನ್ನ ಮುಂದ ಒಡದ ಹೇಳ್ತಿ ಅಂತ ನಿನ್ಹಂಗ ನಾನೂ ಒಡದ ಹೇಳ್ತಿನಿ ಅಂತ ತಿಳದೀಯೇನು? Imposs

ಕುಲಕರ್ಣಿ—ಹೇಳ್ಯಾ ಹಂಗರ—ನಾನೂ ಃ ಃ ....ನೀನ ಹೇಳೊ.

ಕುಲಕರ್ಣಿ—ಹೇಳ್ಯಾ ಹಂಗರ ನೋಡು ನೋಡ ಮತ್ತ ಮಂದಿ ಮುಂದ ನನ್ನ ಮಾನಾ ಕಳದೀ (ದೇಶಪಾಂಡೆ, ಊಂ, ಹೂಂ ಎಂದು

ಗೋಣು ಹಾಕುವನು.) ನಾನೂ s........ನಾನೂ s......s s ಗ ಹಾಕೀನ್ನೋಡ್ಪಾ.

ದೇಶಪಾಂಡೆ—(ಕೈಹಿಡಿದು) Happy coincidence............ Expected ನಾನೂ........ಅವಗ ನೋಡು (ಇಬ್ಬರೂ ನಗುವರು)

ಕುಲಕರ್ಣಿ – ರಾತ್ರಿ ಕಂಡಬಂತು. ನಮ್ಮ ಬಸಂತಾ ಆರಿಸಿ ಬರೂ Chance ಇಲ್ಲಾ ಅಂತ ಅದಕ್ಕ ಮುಂಜೆನೆ s. s. ನ side ಹಿಡಿದ ಬಿಟ್ಟೆ.

ದೇಶಪಾಂಡೆ—ಮತ್ತ ಗೆದಿಯೂ ಎತ್ತಿನ ಬಾಲಾ ಹಿಡದ್ರ ಏನಾರ ಸಿಕ್ಕಿತಪಾ.

ಕುಲಕರ್ಣಿ— ಆದ್ರ ಅವಾ Mr. Patil ಮಾತ್ರ s. s. ಗ promise ಮಾಡಿ canvass ಮಾಡಿ ಕಡಿಗೆ ಬಸಂತ್ಗ ತನ್ನ personal Vote ಹಾಕೀದ್ನಂತ! ಹಿಂಗ Deceive ಮಾಡ್ತಿತಾರ ರೇನ್ಪಾ.

ದೇಶಪಾಂಡೆ—ನಮ್ಹಂಗ ಅವ್ನೂ........ನಮಗ ಮಾತ್ರ ಎರಡೂ ಕಡಿಂದೂ ಫಾಯಿದೆ ಆದ ನೋಡು ಇತ್ಲಾಗ s s ಬಂದ್ರ ಅವಗ personal Vote ಹಾಕೀವಿ ಅವನ್ನಿಂದ Advantage ಸಿಗ್ತದ. ಇನ್ನ ನಮ್ಮ ಬಸಂತ ಬಂದ್ರಂತೂ ಏನ ಕೇಳ್ತಿಯೊ ಅವನ side canvass ಮಾಡಿವೆಲ್ಲಾ.

ಕುಲಕರ್ಣಿ—ಹೌದಣಾ Brokers ರ್ಹಂಗ ಎರಡೂ ಕಡಿಂದೂ commission ಆದ ನೋಡೊ Result ಹಂಗರ ಮಜಾ ಆದ ನಡಿ —(ಹೋಗುವರು)

## ಪ್ರವೇಶ ೫. [ತುಸು ದಿನಗಳು ತೀರಿದ ಮೇಲೆ]

(ಶಾಮನ ಮನೆ ಶಾಮನೊಬ್ಬನೇ ಕುಳಿತಿದ್ದಾನೆ)

ಹಿಂದಿನ ಕವಿಗಳಿಗೆ ರಾಜಾಶ್ರಯಾ ಸಿಗತಿತ್ತು. ಅಂತ ಬೇಕಾದಂಥಾ ನಾಟ್ಗ ಕಾದಂಬರಿ ಬರೀಲಿಕ್ಕೆ ಉತ್ಸಾಹಾನೂ ಬರತಿತ್ತೂ ಪ್ರೋತ್ಸಾಹಾನೂ ಸಿಗತಿತ್ತು. ಅಂಥಾದು ಈಗಿನ ಕವಿಗಳ್ಗೀನ್ರಿ ಯಾರೂ ಒಂದ

ಕಪ್ಪ ಚಹಾ ಸುದ್ಧಾ ಕೊಡುದುಲ್ಲಾ. ಮುಂದಕರ್ರ್ಯೇದು ಬಿಡವಲ್ಲ್ಯಾಕ ನಾ ಮಂದಿ ಸಲುವಾಗಿ ಬರಿಯೂದುಲ್ಲಾ ಮಂದಿ ನನ್ನ Article ಓದೂದು ಬ್ಯಾಡಾ ಓದೂದು ಬ್ಯಾಡಾ ಈವ್ರು ಛಾಪಸೂದು ಬ್ಯಾಡಾ ನಾಳೆ ನಾ Graduate ಆದ್ನೆಂದ್ರ Journalist ಆಗ್ತಿನಿ. ಹೌದು, ಸ್ವತಂತ್ರ ಧಂದೆ. ಆ ಮ್ಯಾಲ ತೊಗೊಳ್ರಿ ದಿನಾ ಒಂದ satire ಬರಿತಿನಿ ಈ Editors ರ ಮ್ಯಾಲ! ಸದ್ಯಾಕ್ಕಂತೂ ನನ್ನೊಂದ ಕವಿತಾ, ಒಂದ Article ಉ accept ಆಗ್ಯಾವ ಸಾಕು ಮುಂದ ನೋಡುಣಂತ

[ಶಾಂತಾ ಪ್ರವೇಶಿಸುವಳು. ಕೈಯಲ್ಲಿ ಒಂದ College Miscellany ಮತ್ತು ಒಂದು Magazine ಹಿಡಿದು]

ಶಾಂತಾ – ಇಕಾ [Magazine ಕೊಟ್ಟು] ನಿನ್ನೆ ಸಂಜಿ ಮುಂದ postman ಕೊಟ್ಟು ಹೋದಾ [Miscellany ಕೊಟ್ಟು] ಇದೇ ಈಗ ಇದನ್ನ ಯಾರೊ ಒಗದ ಹೋದ್ರು

ಶಾಮ—[ ಆಶ್ಚರ್ಯದಿಂದಲೂ, ಆನಂದದಿಂದಲೂ ] ಕಲೀದ ಇದ್ದಾವ್ರ ಹಣೇಬಾರಾನ ಇಷ್ಟು 'ಉಣ್ಣ ಕೆಚ್ಚೊಲೊಳಿದ್ದು ನೊರೆ ಹಾಲ' ಎರಡೂ ಪತ್ರಿಕೆಗಳಲ್ಲಿ ಅಮೌಲ್ಯವಾದ ಈ ಕವಿಯ ಲೇಖನಗಳು ಬಂದುದದನ್ನು ಓದುವ ತವಕಗೊಳ್ಳದೆ ಹಾಗಿಯೆ ತಂದಿರುವಿಯಾ? ಇವು ಕವಿರಾಜನಾದ ನಿನ್ನ ಗಂಡನ ಗೌರವವನ್ನು ಘೋಷಿಸುವ ಸಾಹಿತ್ಯ ಶಂಖಗಳು ಒಂದರಲ್ಲಿ ಕವಿತೆ ಒಂದರಲ್ಲಿ prose Article ಹೀಗೆ ಛಾಪಿಸಿ ಬಂದಿವೆ.

ಶಾಂತಾ—ಅವಷ್ಟು ಛಾಪಿಸಿ ಬಂದ್ರ ಏನ ಸಿಕ್ಕಂಗಾತ ನಿಮಗ ಸೌಭಾಗ್ಯಾ?

ಶಾಮ—ಕಂಟಿಮಟಾ ವಸ್ತ್ರಾ ಹಕ್ಕೊಂಬುದೊಂದ ಸೌಭಾಗ್ಯಾ ಅಂತ ತಿಳದಿಯೇನು? ಕಾವ್ಯದ ಮುಂದೆ ಯಾವ ಸೌಭಾಗ್ಯವಿರುವದು ಇವು ನಿನ್ನ ಹಾಗು ನಿನ್ನ ನಲ್ಲನ ಬಿಂಕವನ್ನು ಬಿಚ್ಚಿ ಹೇಳುವ ಹೆಮ್ಮೆಯ ಹೆಗ್ಗುರುತುಗಳು

ಶಾಂತಾ—ಏನಾರ ಛಾಪಸೇರ ತಗಿರಿ ನೋಡುಣು.

ಶಾಮು—ಶುಸು ತಡೆ ಇಂದಿನಿಂದ ನಿನ್ನ ಗಂಡನು ಕರ್ನಾಟಕದ ಚಿರಸಾಹಿತಿಯಾದನು. 'ಸಿರಿಗನ್ನಡಂ ಗೆಲ್ಗೆ'

ಶಾಂತಾ—ಏನಾರ ಅದ ತಗಿರಿ ನೋಡುಣು.

ಶಾಮು –ಆ ಮೊನ್ನಿನ ಕವನ ನಿನ್ನ ಸಿಟ್ಟಿನ ಸನ್ನಿವೇಶದಲ್ಲಿ ಕಟ್ಟಿದ್ದು ನೀನು ಆ ಕವನದ ಕೆಳಗಿನ ಹೆಸರನ್ನು ಓದುವೆನೆಂದರೆ ಮಾತ್ರ ತೋರಿಸುವೆನು.

ಶಾಂತಾ—ಯಾವ ಹೆಸರು ?

ಶಾಮು—ಮದಿವ್ಯಾಗಿ ಮೂರ ವರ್ಷಾದ್ರೂ ಯಾವ ಹೆಸರ? ಮರ್ತ ಬಿಟ್ಟೀನಿಷ್ಟ್ಯಾಗ........ಶಾಂತಾನಾಥ ಶಾಮುನೆಂಬುವದು! ಈ ಕವನಕ್ಕೆ ಮುದ್ರಾಂ ಶಾರದಾತನಯ ಶಾಮುನೆಂದು ಅಳಿಸಿ ಶಾಂತಾನಾಥ ಶಾಮು ನೆಂದು ಇಟ್ಟಿದ್ದೀನೆ. ಹೀಗೆ ಬಾ ನಾನು ಹೇಳಿದಂತೆ ಅನ್ನು

ಶಾಂತಾ--ನಾ ಅಂಬೂದು ಬ್ಯಾಡಾ ನೀವ್ ಹೇಳೂದು ಬ್ಯಾಡಾ

ಶಾಮು—ಅಂ? ಇಷ್ಟ ಕಷ್ಟಬಟ್ಟು ಸ್ಫೂರ್ತಿಗೊಂಡು ಬರೆದ ಕವನದ ಕೆಳಗಿನ ಹೆಸರನ್ನು ಹೇಳುವದಿಲ್ಲವೇ? ....ಚನ್ನೆ, ನನ್ನ ಮಾವನ ಹೆಣ್ಣೆ. ನನ್ನ ಮಾವಿನ ಹಣ್ಣೆ, ಹಣ್ಣಿನಂತೆ ರುಚಿಯಾದ ಈ ಕವನ ವನ್ನು ರುಚಿಸು [Miscellany ತೆಗೆದುಕೊಂಡು] ಇತ್ತ ಬಾ ಈ ಕವನವನ್ನು ನಾನು ಹೇಳಿದಂತೆಯೆ ಅನ್ನು. [ಪಾನು ತಿರುವಲು ಕವಿ ತೆಯು ಸಿಗುವದಿಲ್ಲ. ಏಳೆಂಟು ಸಾರೆ ನೋಡಿ........ಆಶ್ಚರ್ಯದಿಂದಲೂ ನಾಚಿಕೆಯಿಂದಲೂ] [ಸ್ವಗತ] ಎಲಾ! ಅನುಕ್ರಮಣಿಕೆಯೊಳಗ ನಮ್ಮ ಹೆಸರಿಲ್ಲಾ! ಒಳಗ ನಮ್ಮ ಕವಿತಾ ಇಲ್ಲಾ! ಏನಿದು! ನನ್ನ ಕವಿತಾ ಹಾಕಿಯೇ ಇಲ್ಲ! ಎಂತಹ ಅಪಮಾನವು!....ಆತು ನಮ್ಮಾಕಿ ಕಲೀದ ಇದ್ದದ್ದ ಗುಣಾ ಆತು. ನನ್ನ ಮರ್ಯಾದಿ ಕಾಯ್ದ್ಹ್ಯು, ಮಾರಾಯ್ತು.... [Magazine ತೆಗೆದುಕೊಂಡು] [ಪ್ರಕಾಶ] [ನಾಚಿಗೆಯಿಂದ] ಪ್ರಿಯೆ ನನ್ನ ಕವನವು ಮುಂದಿನ ಸಲ ಬರಬಹುದು. [ಗೌರವದಿಂದ] ಇಕೊ ಇದರಲ್ಲಿ ನಿನ್ನ ಗಂಡನ ಲೇಖನವಿದೆ. ಅದನ್ನಾದರೂ ತೋರಿಸುವೆನು ಇತ್ತ ಬಾ [ಪಾನು ತಿರುವ ಹತ್ತುವನು. ಅದೂ ಸಿಗುವದಿಲ್ಲ] ಯಾಲಾ

ಇವ್ನ! ಕಡಿಕೆ Deceive ಮಾಡೀದ್ರಲ್ಲ! cheated I am cheated

[ನಾಚಿಗೆಯಿಂದ ಹೆಂಡತಿಯನ್ನು ನೋಡುತ್ತ ನಿಲ್ಲುವನು]

ಶಾಂತಾ—[ನಗುತ್ತ] ಯಾಕ ? ಛಾಪಿಸಿ ಬಂದಿಲ್ಲೇನು?

ಶಾಮ—ಇಲ್ಲಾ ಮುಂದಿನ ಸರಿ ಹಾಕ್ತಾರಂತ [ಸ್ವಗತ] ಹೇ ಭಗವಂತಾ! ಈ ಕವಿತೆ ಬರೆಯುವ ಹುಚ್ಚನ್ನು ನನ್ನಲ್ಲಿ ಏತಕ್ಕೆ ಊರಿದೆ ಈ ಕವಿತೆ ಬರಿಯುವದೂ ಬೇಡಾ ಇವರು ಛಾಪಿಸುವದೂ ಬೇಡಾ.. [ಪ್ರಕಾಶ] ತಾಟು ಮಣಿ ಹಾಕ ನಡಿ [ಶಾಂತಾ ಮುಂದೆ ಹೋಗುವಳು] Election ಅಂತ Election ಉ ಯಲ್ಲಾಗ್ರ್ಯೂ Election ನಮಗ ಮಾತ್ರ Dejection.

—‡[ಮುಗಿದುದು.]‡—